ಳಿಗೆ ಸರ್ವ ಅಧಿಕಾರ ಕೊಟ್ಟನು. ಆ ರಾಯನು ಸಾಯುಲಾಗಿ, ಅವಳು ಇವನ ಒಡವೆಗಳೆಲ್ಲಾ, ಕೈಯಲ್ಲಿದ್ದ ಉಂಗರವನ್ನು ಮೊದಲಾಗಿ ಕಿತ್ತುಕೊಂಡು ಹೋದಳು. ರಾಯನು ಕೊನೇಪ್ರಾಣದಲ್ಲಿದ್ದಾಗ, ಅವನಿಗೆ ಅವಧಿ ಅಭ್ಯಂಗ ಸಿಕ್ಕಿತು.

ಪ್ರ. ಎಡ್ವಾರ್ಡೆಂಬವನ ಜಗಳಗಳಿಂದ ಯಾವದೊಂದು ಪ್ರಯೋಜನ ಇಂಗ್ಲಾಂಡ್ ದೇಶಕ್ಕೆ ಬಂತೋ ?

ಉ. ಋಣಗಳೇ ಹೊರ್ತು ಬೇರೆ ಫಲವು ಇಲ್ಲಾ. ಆದರೆ ಅವನು ಗೊಂಡಂಥ ಕೀರ್ತಿಯ ನಿಮಿತ್ತ ಜನರು ಇವನ ಮೇಲೆ ಭ್ರಮೆಯಾಗಿದ್ದರು.

ಪ್ರ. ಎಡ್ವಾರ್ಡೆಂಬ ರಾಯನು ಸಾಯುವಾಗ ಅವನಿಗೆ ಎಷ್ಟು ಪ್ರಾಯವಿತ್ತು ?

ಉ. ೬೫ ಪ್ರಾಯದವನಾಗಿದ್ದನು. ೧೩೨೭ ನೇ ಸಂವತ್ಸರದಲ್ಲಿ ಸಿಂಹಾಸನವ ಏರಿ, ೧೩೭೭ ನೇ ಸಂವತ್ಸರದಲ್ಲಿ ಸತ್ತನು.

## ೨ನೇ ರೀಚರ್ಡ್ (Richard II.)

(A. D. 1377 — 1399.)

ಪ್ರ. ಎಡ್ವಾರ್ಡ್ ಎಂಬವನಿಗೆ ಬದಲಾದವನ್ಯಾರು ?

ಉ. ಇವನ ಮೊಮ್ಮಗನಾದ ರೀಚರ್ಡ್ ಎಂಬವನೇ. ಅವನು ಬ್ಲಕ್ ಪ್ರಿನ್ಸ್ ಎಂಬವನ ಮಗನಾಗಿಯೂ

ಬೊರ್ದೋ ಎಂಬ ಅಡ್ಡೆಸರ್ಗೊಂಡವನಾಗಿಯೂ ಇದ್ದನು.

ಪ್ರ. ಸಿಂಹಾಸನ ಏರಿದಾಗ ಆ ರಾಯನಿಗೆ ಕೊಂಚ ಪ್ರಾಯವಿತ್ತಲ್ಲವೋ ?

ಉ. ಹೌದು; ಆದದರಿಂದ ಅವನ ಚಿಕ್ಕಪ್ಪಂದಿರುಗಳಾದ ಲಂಕಾಸ್ತರ್, ಯೋರ್ಕ್, ಗ್ಲೋಸ್ತರ್ ಎಂಬ ಈ ಮುವ್ವರು ಪ್ರಧಾನಿಗಳ ಕೈಯ್ಯಲ್ಲಿ ಅಧಿಕಾರವು ಬಿತ್ತು.

ಪ್ರ. ಈ ರಾಜ್ಯಭಾರವು ಹ್ಯಾಗೆ ಉಪಕ್ರಮಿಸಿತು ?

ಉ. ಕಲಹದಿಂದಲೂ ಫಿತೂರಿಯಿಂದಲೂ ಉಪಕ್ರಮಿಸಿತು. ಪ್ರಜೆಗಳು ತಂಮ ಮರಳು ತಿಳಿದು, ನಿತ್ಯ ಜಗಳಗಳಿಂದ ನಿರ್ಭಾಗ್ಯವೂ ಜಾಸ್ತಿ ಕಂದಾಯವೂ ಬರುವದೇ ಹೊರತು ಇತರ ಫಲವಿಲ್ಲವೆಂದು ಅರಿತ ಬಳಿಕ, ಹೊಸ ರಾಯನ ಮಂತ್ರಿಗಳಂನು ಎದುರಿಸಿ ಕಲಹವೆಬ್ಬಿಸಿದರು.

ಪ್ರ. ಕಲಹಗಳಿಗೆ ಮುಖ್ಯಸ್ತನು ಯಾರು ?

ಉ. ವತ್ ಟೈಲರ್ (Wat Tyler) ಎಂಬ ಹೆಸರುಳ್ಳ ಒಬ್ಬ ಕಂಮಾರನೇ; ಒಂದು ತೆರಿಗೆಯ ನಿಮಿತ್ತವಾಗಿ ಕಲಹವಂನೆಬ್ಬಿಸಿದನು.

ಪ್ರ. ಕಲಹಕಾರರು ಅನೇಕರಾಗಿದ್ದರೋ ?

ಉ. ಬ್ಲಖೀಥ್ (Blackheath) ಎಂಬ ಸ್ಥಳದಲ್ಲಿ ಒಂದು ಲಕ್ಷ ಜನರ ಮಟ್ಟಿಗೂ ಕೂಡಿದರು.

ಪ್ರ. ಅವರು ಮಾಡಿದಂಥಾ ಅಕ್ರಮಗಳೇನು ?

ಉ. ಲೊಂಡನ್ ನಗರಕ್ಕೆ ಸೇರುತ್ತಲೇ, ಜೆರುಸಲೆಂ (Jerusalem) ಪಟ್ಟಣದ ಸನ್ಯಾಸಿಬಂಟರ ಮಠವಂನು

ಸುಟ್ಟು, ಲಂಕಾಸ್ತರ್ ಪಾಳ್ಯಗಾರನಾದ ಜೋನ್ ಒವ್ ಗಂಟ್ (John of Gaunt) ಎಂಬ ಧೊರೆಯ ಅರಮನೆಯನ್ನು ಹಿಡಿದಲ್ಲದೆ, ತಮಗೆ ವೈರಿಗಳಾಗಿದ್ದ ಅನೇಕ ಸರದಾರ ರಿಗೆ ತಲೆ ಹೊಯಿಸಿದರು.

ಪ್ರ. ಅಂಥಾ ಕಲಹವು ಹ್ಯಾಗೆ ನಿಲ್ಲಿಸಲ್ಪಟ್ಟಿತು?

ಉ. ಸ್ಮಿಥ್ಫೀಲ್ಡ್ (Smithfield) ಎಂಬ ಸ್ಥಳದಲ್ಲಿ ಅವ ರೊಂದಿಗೆ ಸಲ್ಲಾಪಿಸ ರಾಯನಿಗೆ ಅಗತ್ಯವಾಯಿತು.

ಪ್ರ. ಆಗ ರಾಯನು ಯಾವ ಪ್ರಕಾರವಾಗಿ ನಡೆ ದನು?

ಉ. ಬಹು ವಿವೇಕವನ್ನೂ ಧೈರ್ಯವನ್ನೂ ತೋರಿ ಸಿಕೊಂಡನು. ತೈಲರ್ ಎಂಬ ಕಲಹಕಾರನು ರಾಯನಿಗೆ ಬಹು ಗರ್ವದಿಂದ ಮಾತಾಡುತ್ತಿರಲಾಗಿ, ಲೊಂಡನ್ ಪಟ್ಟಣದ ಅಧಿಕಾರಿಯಾದ ಸರ್ ವಿಲ್ಯಂ ವಲ್ವೊರ್ಥ್ (Sir William Wallworth) ಎಂಬವನು ತನ್ನ ಮುದ್ರೇ ದಂಡ ಎತ್ತಿ ಅವನನ್ನು ಬಡಿದು ಕೊಂದುಹಾಕಿದನು. ಆಗ ಕಲಹ ಕಾರರು ತಮ್ಮ ಗುರಿಕಾರನ ಸಂಹಾರಕ್ಕಾಗಿ ಕೋಪಪಟ್ಟು ಯುದ್ಧಕ್ಕೆ ಬರಲಾಗಿ, ರಾಯನು ಅವರಿಗೆ ಎದುರಾಗಿ ನಿಂತು, ಅವರನ್ನು ಸಮುಹಾಯಿಸಿ, ಅವರ ಇಷ್ಟಪ್ರಕಾರ ಒಂದು ಕರಾರು ಬರಿಸಿಕೊಟ್ಟನು. ಆಗ ರೀಚರ್ಡೆಂಬ ವನಿಗೆ ೧೫ ಪ್ರಾಯ ಮಾತ್ರವಿತ್ತು.

ಪ್ರ. ತರುವಾಯ ಹ್ಯಾಗೆ ನಡೆದನು?

ಉ. ರಾಯನಿಗೆ ೨೨ ಪ್ರಾಯವಾದ ವರಿವಿಗೂ ಅವನ

ಚಿಕ್ಕಪ್ಪಂದಿರುಗಳು ರಾಜ್ಯಾಧಿಕಾರ ಬಿಡಲಿಲ್ಲಾ. ಲಂಕಾಸ್ತರ್ ಎಂಬವನು ತಾನು ರಾಯನ ಮತ್ಸರಕ್ಕೆ ಗುರಿಯಾಗಿದ್ಧೇನೆಂದು ತಿಳಿದು ಸ್ಪೇನ್ (Spain) ದೇಶಕ್ಕೆ ಹೋಗಿ ಅಲ್ಲಿ ನಿವಸಿಸಿದನು. ಗ್ಲೋಸ್ತರೆಂಬವನು ರಾಯನಿಗೂ ಪ್ರಭುಗಳಿಗೂ ಪ್ರಜೆಗಳಿಗೂ ಯಾವಾಗಲೂ ವ್ಯಾಜ್ಯಗಳನ್ನು ಹುಟ್ಟಿಸಿದ್ದರಿಂದಲೂ, ನೀತಿ ಇಲ್ಲದೆ ಸೈಮೊನ್ ಬರ್ಲೀ (Simon Burley) ಎಂಬವನನ್ನೂ ಬೇರೆ ರಾಜ ಚಾಕರಿಯವರನ್ನೂ ಹತ ಮಾಡಿಸಿದ್ದರಿಂದಲೂ, ಕಡೆಯ ಲ್ಲಿ ಕಾಲೇಸ್ ಎಂಬ ಪಟ್ಟಣದಲ್ಲಿ ಬಂದಿಯವನಾಗಿ ಇರಿಸಲ್ಪಟ್ಟು ರಾಯನ ರಹಸ್ಯವಾದ ಹುಕುಂ ಮೇರೆಗೆ ಕೊಲ್ಲಲ್ಪಟ್ಟನಂತೆ.

ಪ್ರ. ರೀಚರ್ಡೆಂಬವನಿಗೆ ನಿಜವಧಿಕಾರ ಸಿಕ್ಕಿದ ಬಳಿಕ, ಇವನ ನಡತೆ ಎಂಥಾದ್ದಾಗಿತ್ತು?

ಉ. ಶಾಂತವೂ ನೀತಿಯೂ ಉಳ್ಳದಾಗಿತ್ತೆಂದು ತೋರುತ್ತದೆ. ಇವನಿಗೆ ಮಾಡತಕ್ಕ ಆಕ್ಷೇಪಣೆ ಎಂಥದೆಂದರೆ, ತಮಾಷೆ ಆಟಪಾಟಗಳ ಮೇಲೆ ಅತ್ಯಧಿಕ ಆಸೆಪಟ್ಟು ವ್ಯರ್ಥವಾದ ಖರ್ಚು ಮಾಡಿದ್ದೇ ಸರಿ; ಆದಾಗ್ಯೂ ಅಂಥಾ ಖರ್ಚಿನ ನಿಮಿತ್ತವಾಗಿ ಪ್ರಜೆಗಳ ಕಂದಾಯ ಹೆಚ್ಚಿಸಿದನೆಂದು ಕಾಣುವದಿಲ್ಲಾ.

ಪ್ರ. ರೀಚರ್ಡ್ ಎಂಬವನು ತನ್ನ ರಾಜ್ಯಭಾರ ಹ್ಯಾಗೆ ಹೋಗಲಾಡಿಸಿದನು?

ಉ. ಲಂಕಾಸ್ತರ್ ಎಂಬವನ ಮಗನಾಗಿಯೂ ರೀಚರ್ಡೆಂಬವನಿಗೆ ತಮ್ಮನಾಗಿಯೂ ಇದ್ದ ಹೆನ್ರಿ ಹಿಫೋರ್ಡ್

ರ್ಡ್ (Hereford) ಎಂಬವನು ಮುಂಚೆ ಇಂಗ್ಲಾಂಡ್ ಸೀಮೆಯಿಂದ ಗಡಿದಾಟಿಸಲ್ಪಟ್ಟಿದ್ದನು. ತನ್ನ ತಂದೆ ಸತ್ತ ಸಮಾಚಾರವ ಕೇಳಿ, ಒಂದು ದಂಡೆತ್ತಿ, ಇಂಗ್ಲಾಂಡ್ ಸೀಮೆಗೆ ತಿರಿಗಿ ಬಂದು ಪಿತ್ರಾರ್ಜನೆ ಕೇಳಿಕೊಂಡನು. ಮತ್ತು ಅನೇಕರು ಅವನಿಗೆ ಸಹಾಯ ಮಾಡಿ ರಾಯನ ಪಾರ್ಶ್ವ ಬಿಟ್ಟರು.

ಪ್ರ. ಹೆನ್ರಿಯ ನಿಜ ಅಭಿಪ್ರಾಯವು ಯಾವದು?

ಉ. ತನ್ನ ಅಣ್ಣನಾದ ರೀಚರ್ಡೆಂಬವನ ರಾಜ್ಯ ಭಾರವನ್ನು ಕಿತ್ತುಕೊಳ್ಳುವದೇ. ಮತ್ತು ಹಾಗೆಯೇ ಅವನನ್ನು ಚೆಸ್ಟರ್ (Chester) ಪಟ್ಟಣದಲ್ಲಿ ಹಿಡಿದು ನಾನಾ ಅವಮಾನ ಮಾಡಿ, ಲೊಂಡನ್ ನಗರದ ಕೋಟೆಯಲ್ಲಿ ಬಂದಿಯವನಾಗಿ ಇರಿಸಿದ್ದಲ್ಲದೆ, ಆ ರಾಯನು ರಾಜೀನಾಮೆ ಬರೆದು ಕೊಡುವಂತೆ ಅವನಿಗೆ ಕಡ್ಡಾಯ ಮಾಡಿದನು.

ಪ್ರ. ಹೆನ್ರಿ ಎಂಬವನ ಗುಣ ಎಂಥಾದ್ದಾಗಿತ್ತು?

ಉ. ಇವನು ಅಧಿಕಾರದ ಮೇಲೆ ಭ್ರಮೆಯುಳ್ಳವನೂ ಅನೇಕ ಅನ್ಯಾಯ ನರಹತ್ಯ ಮಾಡಿದವನೂ ಆಗಿದ್ದಾಗ್ಯೂ, ತನ್ನ ಹೊರಗಿನ ನಡತೆಯಲ್ಲಿ ಮಿತಿಯನ್ನೂ ದೇವಭಕ್ತಿಯನ್ನೂ ಕಪಟವಾಗಿ ತೋರಿಸಿಕೊಳ್ಳುತ್ತಾ ಇದ್ದನು.

ಪ್ರ. ರೀಚರ್ಡೆಂಬವನು ರಾಜೀನಾಮೆ ಕೊಟ್ಟ ಮೇಲೆ ಹೆನ್ರಿಯು ಸಿಂಹಾಸನಕ್ಕೆ ಬಾಧ್ಯನಾಗಿದ್ದನೋ?

ಉ. ಇಲ್ಲಾ. 3 ನೇ ಎದ್ವಾರ್ಡೆಂಬ ರಾಯನ ಎರಡನೇ ಕೊಮಾರನಾದ ಲೈಯೊನೆಲ್ (Lionel) ಎಂಬವನು

ಮೊರ್ತಿಮೆರ್ ಎಂಬ ಒಬ್ಬ ಮಗನನ್ನು ಪಡೆದಿದ್ದನು. ಆ ಮೊರ್ತಿಮೆರೆಂಬ ಪ್ರಧಾನಿ ನಿಜ ಬಾಧ್ಯಸ್ತನಾಗಿದ್ದನು. ಇದಲ್ಲದೆ, ಇವನ ಮಗಳು ಯೋರ್ಕ್ ಎಂಬ ವಂಶದಲ್ಲಿ ಮದುವೆ ಮಾಡಿಕೊಂಡದರಿಂದ, ಆ ವಂಶದವರಿಗೆ ಕಿರೀಟದ ಮೇಲೆ ಸ್ವತಂತ್ರವು ಬಂದ ಹಾಗಾಯಿತು.

ಪ್ರ. ಹಾಗಾದರೆ, ಹೆನ್ರಿ ಎಂಬ ರಾಯನಿಗೆ ನ್ಯಾಯವಾದ ಬಾಧ್ಯತೆ ಇರಲಿಲ್ಲವೋ ?

ಉ. ಎಷ್ಟು ಮಾತ್ರವಿಲ್ಲ. ಮತ್ತು ಇವನ ಅನ್ಯಾಯವಾದ ಚೋರತನದಿಂದ ಯೋರ್ಕ್ ಮತ್ತು ಲಂಕಾಸ್ತರ್ ಎಂಬ ವಂಶದವರಿಗೆ ಆ ಮೇಲೆ ಬರು ವ್ಯವಹಾರ ಹುಟ್ಟಿತು.

ಪ್ರ. ಹೆನ್ರಿ ತಂನ ರಾಜ್ಯಭಾರ ಸಮಾಧಾನವಾಗಿ ಅನುಭವಿಸಿದನೋ ?

ಉ. ಇಲ್ಲಾ. ರೀಚರ್ದೆಂಬವನಿಗೆ ಒತ್ತಾಸೆಯಾಗಿ ಜನರು ಕಲಹವೆಬ್ಬಿಸಿದರು. ಆಗ ಹೆನ್ರಿ ಎಂಬವನು ಪೊಂಫ್ರೆಟ್ (Pomfret) ಕೋಟೆಯಲ್ಲಿ ತಂನ ಅಂಣನಾದ ರೀಚರ್ದೆಂಬವನಂನು ಕೊಲ್ಲ ವಿಧಿಸಿದನು. ರೀಚರ್ದೆಂಬ ರಾಯನಿಗೆ ೧೩೭೭ ನೇ ಸಂವತ್ಸರದಲ್ಲಿ ರಾಜಾಧಿಕಾರವುಂಟಾಗಿ, ೧೩೯೯ ನೇದರಲ್ಲಿ ತೀರಿಹೋದನು.

## ೪ನೇ ಹೆನ್ರಿ (Henry IV.)

(A. D. 1399—1412.)

---

ಪ್ರ. ರೀಚರ್ಡ್ ರಾಯನು ಸತ್ತ ಮೇಲೆ ಕಲಹಂಗಳು ಸುಂಮನೆ ಇದ್ದರೋ ?

ಉ. ಇಲ್ಲಾ. ಡುಗ್ಲಾಸ್ (Douglas) ಮತ್ತು ನೋಥೋರ್ಂಬೆಲೋರ್ಂಡ್ ಎಂಬ ಇಬ್ಬರು ಪ್ರಭುಗಳು ಮೊರ್ಟಿಮೆರ್ ಎಂಬ ಪ್ರಧಾನಿಯಂನು ಸಿಂಹಾಸನದ ಮೇಲೆ ಇರಿಸುವ ಬಗ್ಯೆ ದೊಡ್ಡ ರಾಣುವೆ ಕೂಡಿಸಿಕೊಂಡರು.

ಪ್ರ. ಹೆನ್ರಿ ಎಂಬ ರಾಯನು ಅಂಥಾ ಕಲಹವಂನು ನೀಗಿಸಿದನೋ ?

ಉ. ನೀಗಿಸಿದನು. ಷ್ರುಸ್ಬರಿ (Shrewsbury) ಎಂಬ ಲಡಾಯಿಯಲ್ಲಿ ಕಲಹಂಗಳಂನು ಜಯಿಸಿದ್ದಲ್ಲದೆ, ನೋಥೋರ್ಂಬೆಲೋರ್ಂಡ್ ಪ್ರಭುವಿನ ಕುಮಾರನಾದ ಹೊತ್ಸ್ಪರ್ (Hotspur) ಎಂಬವನನ್ನು ಕೊಂಧಾಕಿದನು.

ಪ್ರ. ಆ ಬಳಿಕ ರಾಯನಿಗೆ ಸಮಾಧಾನ ದೊರಕಿತೋ?

ಉ. ಇಲ್ಲಾ. ಒಂದು ಕಲಹದ ಮೇಲೆ ಇನ್ನೊಂದು ಕಲಹ ಎದ್ದಿತು; ಏನೆಂದರೆ ತಾನು ಅನ್ಯಾಯವಾಗಿ ಸಂಹರಿಸಿದ ತಂನ ಅಂಣನ ರಕ್ತಕ್ಕಾಗಿ ಹೆನ್ರಿ ಎಂಬವನು ಅಂಥಾ ಶಿಕ್ಷೆಗಳ ಅನುಭವಿಸ ತಕ್ಕದ್ದಾಗಿತ್ತು. ಆದಾಗ್ಯೂ ತಾನು ಸಾಯುವದಕ್ಕೆ ಮುಂಚೆ ಅತಿಮೀತ್ರಾಣಿಯವರಾದ ಸ್ಕ್ರೂಪ್ (Scroope) ಎಂಬವರಂನು ಸ್ವೇಚ್ಛೆಯಾಗಿ ನೀತಿ

ನ್ಯಾಯವಿಲ್ಲದೆ ಮರಣಕ್ಕೆ ನಿರ್ಣಯಿಸಿದ್ದು ಇನ್ನೊಂದು ಅಸಂಖ್ಯವಾದ ಪಾತಕವಾಯಿತು.

ಪ್ರ. ಮುಪ್ಪು ಪ್ರಾಯದಲ್ಲಿ ಹೆನ್ರಿ ಎಂಬವನು ವ್ಯಾಧಿಯಲ್ಲಿ ಬಿದ್ದನೋ ?

ಉ. ಹೌದು ; ಮತ್ತು ಅದು ದೇವ ಶಿಕ್ಷೆ ಎಂದು ಜನರು ಅಂದುಕೊಂಡಿದ್ದರು. ಕಡೆಯಲ್ಲಿ ಅವನು ೪೬ ಪ್ರಾಯದವನಾಗಿ ಸತ್ತನು ( ೧೪೧೨ ). ೧೪ ವರುಷ ರಾಜ್ಯಭಾರ ಮಾಡಿ ಇದ್ದನು.

## ೫ ನೇ ಹೆನ್ರಿ (Henry V.)

(A. D. 1412 — 1422)

ಪ್ರ. ೫ ನೇ ಹೆನ್ರಿ ಎಂಬವನ ರಾಜ್ಯಭಾರವು ಹ್ಯಾಗೆ ಉಪಕ್ರಮಿಸಿತು ?

ಉ. ಲೊಲರ್ಡ್ (Lollard) ಎಂಬ ಪತಿತರು ಕಲಹ ಎಬ್ಬಿಸಿದರು.

ಪ್ರ. ಲೊಲರ್ಡರೆಂಬುವವರ್ಯಾರು?

ಉ. ಪ್ರೊತೆಸ್ತಾಂತರಿಗೆ ಮುಂಚೆ ಬಂದ ಒಂದು ಬಗೆಯ ಪತಿತರೇ. ಅವರ ತಲೆಯಾದ ವಿಕ್ಲಿಫ್ (Wickliff) ಎಂಬವನು ದಿವ್ಯ ಪೂಜೆಯನ್ನೂ ಪಾಪಸಂಕೀರ್ತನವನ್ನೂ ಗುರುಗಳ ಅಧಿಕಾರವನ್ನೂ ಬೊಂಕಿದ್ದಲ್ಲದೆ, ತನ್ನನ್ನು ನಂಬಿದವರನ್ನು ರಾಯನಿಗೆ ವಿರೋಧವಾಗಿ ತಿರಿಗಿಸಿದನು.

ಪ್ರ. ಆ ಪತಿತರು ಮಾಡಿದ ಪ್ರಧಾನವಾದ ಅಕೃತ್ಯಗಳೇನು ?

ಉ. ಅವರು ದೊಡ್ಡ ಗುಂಪುಗಳಾಗಿ ಸೇರಿಕೊಂಡು ಕಥೋಲಿಕರನ್ನು ಕೊಲ್ಲಲೂ ಅವರ ಮನೆಗಳನ್ನು ದಹಿಸಲೂ ಲೆಖ್ಖವಿಲ್ಲದ ಅಕ್ರಮಗಳಂನು ಹುಟ್ಟಿಸಲೂ ಪ್ರಾರಂಭಿಸಿದರು. ಆದರೆ ಸೇಂತ್ ಜೈಲ್ಸ್ (St. Giles) ಎಂಬ ಮೈದಾನದಲ್ಲಿ ರಾಯನು ತಂನ ದಂಡು ಕೂಡಿಸಿ ಆ ಕಲಹಕಾರರನ್ನು ನಿಗ್ರಹಿಸಿದನು. ಅವರ ಪ್ರಧಾನಿಯಾದ ಲೋಡ್ಡ್ ಕೊಭಂ (Lord Cobham) ಎಂಬವನು ಮೊದಲು ತಪ್ಪಿಸಿಕೊಂಡನು. ಆದರೆ ಅವನು ಬೇರೆ ಫಿತೂರಿ ಮಾಡಿದಾಗ ಹಿಡಿಯಲ್ಪಟ್ಟು ಗಲ್ಲಿಗೆ ಹಾಕಲ್ಪಟ್ಟನು.

ಪ್ರ. ಈ ರಾಜ್ಯಭಾರದಲ್ಲಿ ಫ್ರೆಂಚ್ ಜನರೊಂದಿಗೆ ಯಾವದೊಂದು ಯುದ್ಧವಾಯಿತೋ ?

ಉ. ಹೌದು ; ಯಾಕಂದರೆ ೬ ನೇ ಚಾರ್ಲ್ಸ್ (Charles VI) ಎಂಬ ಫ್ರೆಂಚ್ ರಾಯನಿಗೆ ಹುಚ್ಚು ಹಿಡಿಯಿತೆಂದೂ, ಅರ್ಮಞ್ಞಕ್ (Armagnac) ಮತ್ತು ಬರ್ಗೂಂದಿಯನ್ (Burgundian) ಎಂಬ ಈ ಎರಡು ಭಾಗಗಳಲ್ಲಿ ವಿಂಗಡಿಸಲ್ಪಟ್ಟು, ಜನರು ತಂಮೊಳಗೆ ಹೋರಾಡುತ್ತಾರೆಂದೂ ಹೆನ್ರಿ ರಾಯನು ತಿಳಿದು, ಒಳ್ಳೇ ಸಮಯ ಎಂಥೆಣಿ, ಫ್ರಾನ್ಸ್ ಸೀಮೆಯಲ್ಲಿ ಅಭಿಯೋಗ ಮಾಡಿದನು.

ಪ್ರ. ಮೊದಲು ಹೆನ್ರಿ ಎಂಬವನಿಗೆ ಜಯವಾಯಿತೋ ?

ಉ. ಇಲ್ಲಾ. ಹರ್ಫ್ಲೇರ್ (Harfleur) ಎಂಬ ಪಟ್ಟಣಕ್ಕೆ ಮುತ್ತಿಗೆ ಹಾಕಿ, ಇದನ್ನು ಬಹು ಪ್ರಯಾಸವಾಗಿ ಹಿಡಿದ ಬಳಿಕ, ರಕ್ತ ಭೇದಿಯಿಂದ ತನ್ನ ದಂಡು ಬಹು ಶ್ರಮೆ ಪಡುತ್ತದೆ ಎಂದರಿತು, ಇಂಗ್ಲಾಂಡ್ ಸೀಮೆಗೆ ತಿರಿಗಿ ಹೋಗ ಬೇಕೆಂದು ಯೋಚಿಸಿ, ಕಾಲೇಸ್ ಪಟ್ಟಣಕ್ಕೆ ಹೊರಟನು.

ಪ್ರ. ಹೆನ್ರಿ ಎಂಬವನು ಹಿಂತೆಗಿಯುವಾಗ, ಇವನಿಗೆ ಅಡ್ಡಿಯಾಯಿತೋ?

ಉ. ಅಲ್ಬ್ರೆತ್ (Albret) ಎಂಬ ಸೇನಾಪತಿಯು ೬೦,೦೦೦ ರಾಣುವೆಯವರೊಂದಿಗೆ ಅವನನ್ನು ನಿಲ್ಲಿಸ ಪ್ರಯಾಸ ಪಟ್ಟನು. ಹೆನ್ರಿ ಎಂಬ ರಾಯನಿಗೆ ೫೦,೦೦೦ ದಂಡಿನವರು ಮಾತ್ರ ಇರುತ್ತಾ ಇದ್ದರು; ಆದರೆ ಫ್ರೆಂಚ್ ದಂಡಿನಲ್ಲಿದ್ದ ಬರ್ಗೊಂದಿಯನ್ ಜಾತಿಯವರೊಳಗೆ ಅವನು ರಹಸ್ಯವಾದ ಒಡಂಬಡಿಕೆ ಮಾಡಿದ್ದರಿಂದ, ಆ ರಾಣುವೆಯವರು, ಜಗಳದ ಸಮಯದಲ್ಲಿ ಯುದ್ಧ ಮಾಡದೆ, ಮೋಸ ಮಾಡಿದರು.

ಪ್ರ. ಆ ಜಗಳದಲ್ಲಿ ಏನಾಯಿತು?

ಉ. ಅಲ್ಬ್ರೆತ್ ಎಂಬ ಸೇನಾಪತಿ ಜಗಳಕ್ಕೆ ತಕ್ಕ ಸ್ಥಳ ಏರ್ಪಡಿಸದೆ ಇದ್ದದ್ದರಿಂದಲೂ, ಬರ್ಗೊಂದಿಯನ್ ಜಾತಿಯವರು ಫಿತೂರಿಯಿಂದ ಸುಮ್ಮನೆ ನಿಂತದ್ದರಿಂದಲೂ, ಫ್ರೆಂಚ್ ದಂಡಿಗೆ ಅಪಜಯವಾಯಿತು. ಈ ಜಗಳ ಅಜಿಂಕೂರ್ (Azincourt) ಎಂಬ ಸ್ಥಳದಲ್ಲಿ ಆಡಲ್ಪಟ್ಟಿತು. (೧೪೧೫.)

ಪ್ರ. ಆ ಜಗಳವಾದ ತರುವಾಯ ಏನಾಯಿತು?

ಉ. ಇಸಬೆಲ್ (Isabel) ಎಂಬ ರಾಣಿಯೂ ಬರ್ಗಂಡಿ (Burgundy) ಪಾಳ್ಯಗಾರನೂ ಹೆನ್ರಿ ಎಂಬ ರಾಯನೊಂದಿಗೆ ಒಡಂಬಡಿಕೆ ಮಾಡಿದರು. ಆದದರಿಂದ ಫ್ರಾನ್ಸ್ ರಾಜ್ಯಭಾರಕ್ಕೆ ಬಾಧ್ಯಸ್ತನಾದ ೭ ನೇ ಚಾರ್ಲ್ಸ್ (Charles VII) ಎಂಬವನು ಅವರಂನು ಎದುರಿಸಲಾರದೆ, ಅನೇಕ ಇಲಾಖೆಗಳಂನು ಹೋಗಲಾಡಿಸಿದನು.

ಪ್ರ. ಹೆನ್ರಿ ರಾಯನಿಗೆ ಕಡೇ ಪರಿಯಂತರ ಶುಭವಾಯಿತೋ?

ಉ. ಇಲ್ಲಾ; ಇವನು, ೩೪ ಪ್ರಾಯದವನಾಗಿದ್ದಾಗ, ವ್ಯಾಧಿಯಲ್ಲಿ ಆಕಸ್ಮಿಕವಾಗಿ ಬಿದ್ದು ಫ್ರಾನ್ಸ್ ದೇಶದಲ್ಲಿ ಸತ್ತನು. ಇವನ ಕುಮಾರನು ಇಂನು ಕೂಸುಮಗುವಾಗಿದ್ದನು.

## ೬ ನೇ ಹೆನ್ರಿ. (Henry VI.)

(A. D. 1422 — 1461.)

ಪ್ರ. ರಾಯನ ಬಾಲ್ಯದ ಕಾಲದಲ್ಲಿ ರಾಜ್ಯಭಾರ ಮಾಡಿದವನ್ಯಾರು?

ಉ. ಬಹು ಸಾಮರ್ಥ್ಯವುಳ್ಳಂಥಾ ಹೆನ್ರಿ ಎಂಬವನ ಸಹೋದರನಾದ ಡ್ಯೂಕ್ ಒವ್ ಬೆಡ್ಫೋರ್ಡ್ (Duke of Bedford) ಎಂಬವನೇ.

ಪ್ರ. ಇಂಣು ಇಂಗ್ಲಿಷ್ ಜನರಿಗೆ ಫ್ರಾನ್ಸ್ ದೇಶದಲ್ಲಿ ಜಯವಾಯಿತೋ?

ಉ. ಕಾದು. ಅನೇಕ ಪಾಳ್ಯಗಾರರು ತಂಮ ತಂಮ ಇಲಾಖೆಗಳಂನು ಕಾಪಾಡುವದಕ್ಕೆ ಇಂಗ್ಲಿಷ್ ಜನರೊಂದಿಗೆ ಸಮಾಧಾನ ಮಾಡಿದ್ದರಿಂದ ಫ್ರೆಂಚ್ ರಾಯನಾದ ೭ ನೇ ಚಾರ್ಲ್ಸ್ ಎಂಬವನಿಗೆ ಬಹು ಸಂಕಟ ಆಗುತ್ತಿತ್ತು. ಕಡೆಯಲ್ಲಿ ಸರ್ವೇಶ್ವರನು ಅದ್ಭುತ ವಿಧವಾಗಿ ಫ್ರಾನ್ಸ್ ದೇಶವಂನು ರಕ್ಷಿಸಿದರು.

ಪ್ರ. ಅದು ಹ್ಯಾಗೆ ?

ಉ. ಪಶ್ಚಿಮ ತಾಲೂಕಿನಲ್ಲಿ ದೊಂರೆಮಿ (Domremi) ಎಂಬ ಒಂದು ಊರು ಉಂಟು. ಆ ಊರಲ್ಲಿ ಬಹು ಮರ್ಯಾದೆಯೂ ದೇವ ಭಕ್ತಿಯೂ ಉಳ್ಳಂಥಾ ಜೋನ್ ಒವ್ ಆರ್ಕ್ (Joan of Arc) ಎಂಬ ಒಬ್ಬ ರುಡುಗಿಯು ಜೀವಿಸುತ್ತಿದ್ದಳು. ತಾನು ಮಂದೆಯನ್ನು ಕಾಯುತ್ತಿದ್ದಾಗ, ಆಕೆಗೆ ದೇವರ ತಾಯ್ಯಾ ಅಚ್ಯರ್. ಮೈಖೆಲ್ (Michaël) ಎಂಬ ಸಂಮನಸ್ಸರೂ ಕಾಣಿಸಿ, ಫ್ರಾನ್ಸ್ ದೇಶವಂನು ಬಿಡಿಸ ಬೇಕೆಂದು ಕಟ್ಟಳೆ ಮಾಡಿದರಂತೆ.

ಪ್ರ. ಆಗ ಜೋನ್ ಒವ್ ಆರ್ಕ್ ಎಂಬವಳು ಏನು ಮಾಡಿದಳು ?

ಉ. ಆಕೆಯು ೭ ನೇ ಚಾರ್ಲ್ಸ್ ಎಂಬ ರಾಯನು ಇದ್ದಂಥಾ ಚೆನೋನ್ ಎಂಬ ಪಟ್ಟಣಕ್ಕೆ ಹೋಗಿ, ಅವನಿಗೆ ತಿಳಿ

ಸಿದ್ದೇನೆಂದರೆ: ನಿಮಗೆ ರಾಜಾಭಿಷೇಕ ಕೊಡಿಸುವದಾಗೂ ಫ್ರಾನ್ಸ್ ದೇಶವನ್ನು ರಕ್ಷಿಸುವದಾಗೂ ದೇವರಿಂದ ಕಳುಹಿಸಲ್ಪಟ್ಟಿದೇನೆಂದು ತಿಳಿಸಿದ್ದಲ್ಲದೆ, ನಿಶ್ಚಯವಾದ ಗುರುತುಗಳಿಂದ ರುಜು ಮಾಡಿದಳು.

ಪ್ರ. ಆಗ ರಾಯನು ಏನು ಮಾಡಿದನು ?

ಉ. ಆಕೆಯ ಮಾತು ನಂಬಿಕೊಂಡು, ದಂಡು ಒಪ್ಪಿಸಿಕೊಟ್ಟು, ಆಕೆಯನ್ನು ಒರ್ಲೇಯನ್ಸ್ (Orleans) ಪಟ್ಟಣವನ್ನು ಬಿಡಿಸುವದಕ್ಕೆ ಕಳುಹಿಸಿದನು. ಆಕೆಯು ಇಂಗ್ಲಿಷ್ ರಾಣುವೆಯವರನ್ನು ಓಡಿಸಿ, ಅವರ ಕೋಟೆಗಳನ್ನು ದಹಿಸಿಬಿಟ್ಟು, ಪಟ್ಣವನ್ನು ರಕ್ಷಿಸಿದಳು.

ಪ್ರ. ಈ ಜಯವಾದ ಬಳಿಕ ಏನು ಸಂಭವಿಸಿತು ?

ಉ. ಎಡೆ ಬಿಡದ ಜಯಗಳು ಫ್ರೆಂಚ್ ದಂಡಿನವರಿಂದ ಗೆಲ್ಲಲ್ಪಟ್ಟವು. ಜರ್ಜೋ (Jargeau), ಬೋಜನ್ಸಿ (Beaugency), ಪತೇ (Patay), ಎಂಬ ಊರುಗಳಲ್ಲಿ ಇಂಗ್ಲಿಷ್ ರಾಣುವೆಯವರು ಅಪಜಯ ಪಟ್ಟದ್ದಲ್ಲದೆ, ಅವರು ಹಿಡಿದು ಇದ್ದ ತ್ರುವಾ (Troyes), ಮತ್ತು ಷಾಲೊನ್ (Châlons) ಎಂಬ ಪಟ್ಣಗಳಿಂದ ತಳ್ಳಲ್ಪಟ್ಟರು. ಮತ್ತು ಜೋನ್ ಒವ್ ಆರ್ಕ್ ಮುಂದರುಹಿಸಿದ ಮೇರೆಗೆ, ಚಾರ್ಲ್ಸ್ ಎಂಬ ರಾಯನು ರೇಂಸ್ (Rheims) ಪಟ್ಣದಲ್ಲಿ ಅಭಿಷೇಕ ಹೊಂದಿದನು.

ಪ್ರ. ಆಗ ಜೋನ್ ಎಂಬ ಕನ್ಯಾಸ್ತ್ರೀಗೆ ಏನಾಯಿತು ?

ಉ. ಬೋವೆ (Beauvais) ಮತ್ತು ಕೊಂಪ್ಯೇಜ್ನ್

(Compiègne) ಎರಡು ಪಟ್ಣಗಳಂನು ಹಿಡಿದ ತರುವಾಯು ಒಂದು ಜಗಳದಲ್ಲಿ ಘಾಯಪಟ್ಟು, ಬಂದಿಯವಳಾಗಿ, ತಂನ ಶತ್ರುಗಳ ಕೈಯಲ್ಲಿ ಬಿದ್ದಳು. ಆಗ ಡ್ಯೂಕ್ ಒವ್ ಬೆಡ್ಫೋರ್ಡ್ ಎಂಬವನು ತಂನ ಛಲವನ್ನು ತೀರಿಸುವದಕಾಗಿ, ಅವಳು ಶೂನ್ಯಗಾರ್ತಿಯಾಗಿದ್ದಾಳೆಂಬ ಅಬದ್ಧ ತೀರ್ಪೆಯಂನು ವಿಂಚೆಸ್ತರ್ ಮೇತ್ರಾಣಿಯವರಿಂದ ಮಾಡಿಸಿ, ಅವಳಂನು ಸುಡಲ್ಪಡುವದಕ್ಕೆ ನಿರ್ಣಯಿಸಿದನು. ಆಕೆಯು ಕಡೇ ಮಟ್ಟಿಗೂ ಜೇಸುವೆಂಬ ತಿರುನಾಮವಂನು ಉಚ್ಚರಿಸಿ ಧೈರ್ಯವಾಗಿ ಸತ್ತಳು.

ಪ್ರ. ಈ ಕ್ರೂರವಾದ ಕೊಲೆಯ ತರುವಾಯು, ಇಂಗ್ಲಿಷ್ ಜನರಿಗೆ ಜಯವಾಯಿತೋ?

ಉ. ಇಲ್ಲ. ಷಾರ್ತ್ರ್ (Chartres), ಪರಿಸ್ (Paris) ಎಂಬ ಪಟ್ಣಗಳು ಫ್ರೆಂಚ್ ರಾಯನಿಂದ ಹಿಡಿಯಲ್ಪಟ್ಟವು; ಮತ್ತು ಕೊಂಚಕಾಲದೊಳಗೆ ಇಂಗ್ಲಿಷ್ ಜನರು ಫ್ರಾನ್ಸ್ ದೇಶದ ಆಚೆ ಓಡಿಸಲ್ಪಟ್ಟರು. ಕಾಲೇಸ್ ಎಂಬ ಪಟ್ಣವು ಮಾತ್ರ ಅವರ ವಶದಲ್ಲಿ ಉಳಿಯಿತು.

ಪ್ರ. ಅಷ್ಟರೊಳಗೆ ಇಂಗ್ಲಾಂಡ್ ದೇಶದಲ್ಲಿ ಕಾರ್ಯಗಳು ಹ್ಯಾಗೆ ನಡಿಯುತ್ತಾಯಿದ್ದವು?

ಉ. ರಾಯನಿಗೆ ಒಳ್ಳೇ ಗುಣವಿದ್ದಾಗ್ಯೂ, ಬುದ್ಧಿಯೂ ವಿವೇಕವೂ ಕಡಿಮೆಯಾಗಿದ್ದವು. ಬಹು ಚುರುಕೂ ಅತಿ ಮಹಾಸೆಯೂ ಉಳ್ಳ ಯೋರ್ಕ್ ಪಾಳ್ಯಗಾರನಾದ ರೀಚರ್ಡ್ ಎಂಬವನು ಅವನ ಕಿರೀಟ ಅಪಹರಿಸ ಯೋಚಿ

ಸಿದನು. ಏನೆಂದರೆ, ತಾಯಿಯ ಕಡೆಯಿಂದ, ಇವನು ಮೋರ್ಟಿಮೆರ್ ಎಂಬ ಪ್ರಧಾನಿಯ ಮೊಮ್ಮಗನಾಗಿಯೂ ಇಂಗ್ಲಿಷ್ ರಾಜ್ಯಭಾರಕ್ಕೆ ಬಾಧ್ಯಸ್ತನಾಗಿಯೂ ಇರುತ್ತಿದ್ದನು.

ಪ್ರ. ಯೋರ್ಕೆಂಬ ಪಾಳ್ಯಗಾರನು ಏನು ಪ್ರಯತ್ನ ಮಾಡಿದನು ?

ಉ. ಪ್ರಜೆಗಳಲ್ಲಿ ಅನೇಕ ಕಲಹಗಳನ್ನು ಎಬ್ಬಿಸಿದನು. ಆಗ ಜೋನ್ ಕೇಡ್ (John Cade) ಎಂಬ ಒಬ್ಬ ಕಲಹದವನು ರಾಯನ ದಂಡು ಎದುರಿಸಿ ಜಗಳವಾಡಿ, ಕಡೆಯಲ್ಲಿ ಪ್ರಯಾಸದಿಂದ ಜಯಿಸಲೂ ಕೊಲ್ಲಲೂ ಪಟ್ಟನು.

ಪ್ರ. ರಾಯನಿಗೆ ಒಂದು ಬಗೆ ರೋಗ ಆಗ ತಗಲಲಿಲ್ಲವೋ ?

ಉ. ಹೌದು. ಅವನು ಮೂರ್ಛೆ ರೋಗದಲ್ಲಿ ಬಿದ್ದದರಿಂದ ರಾಜ್ಯದ ವಿಚಾರಣೆ ಮಾಡ ಕೂಡದವನಾಗಿದ್ದನು. ಆದದರಿಂದ ರಿಚರ್ಡೆಂಬವನು ಶ್ರೇಷ್ಠಾಧಿಕಾರವನ್ನು ಸ್ವೀಕರಿಸಿದನು. ಮತ್ತು ಹೆನ್ರಿ ಎಂಬ ರಾಯನು ಸ್ವಸ್ಥ ಹೊಂದಿದಾಗ ತಾನು ಅಧಿಕಾರವಿಲ್ಲದವನಾಗಿದ್ಧೇನೆಂತ ಕಂಡುಕೊಂಡನು.

ಪ್ರ. ಆದರಿಂದ ಏನು ಸಂಭವಿಸಿತು ?

ಉ. ಪ್ರಜೆಗಳೊಳಗೆ ಜಗಳಗಳು ಉಂಟಾಗಿ, ಹೆನ್ರಿ ಎಂಬವನ ಪಾರ್ಶ್ವದವರು ತಮಗೆ ಬಿರುದಾಗಿ ಕೆಂಪು ಗುಲಾಬಿನ ಹೂವನ್ನೂ ರಿಚರ್ಡೆಂಬವನ ಪಾರ್ಶ್ವದವರು ಒಂದು ಬಿಳಿ ಗುಲಾಬಿನ ಹೂವನ್ನೂ ಧರಿಸಿಕೊಂಡರು.

ಆದ್ದರಿಂದ ಆ ಕೆಂಪು ರೂ ಲಂಕಾಸ್ತರ್ ಗೋತ್ರಕ್ಕೂ ಬಿಳಿ ರೂ ಯೋರ್ಕ್ ಗೋತ್ರಕ್ಕೂ ಲಾಂಛನೆಯಾಯಿತು.

ಪ್ರ. ಹೆನ್ರಿ ಎಂಬವನಿಗೆ ಮುಖ್ಯವಾದ ಆಧಾರವು ಯಾವದು ?

ಉ. ಇವನ ಸತಿಯಾದ ಮಾರ್ಗರೆಟ್ ಒವ್ ಅಂಜೂ (Margaret of Anjou) ಎಂಬವಳೇ. ಆಕೆಯು ಬಹು ಧೈರ್ಯದಿಂದ ಕಾರ್ಯ ನಡಿಸಿ ವಿರೋಧಿಗಳಿಗೆ ಯುದ್ಧ ಮಾಡುತ್ತಿದ್ದಳು.

ಪ್ರ. ಆ ಜಗಳಗಳ ವರ್ತಮಾನವು ಹ್ಯಾಗೆ ?

ಉ. ವಿಚಿತ್ರವುಳ್ಳದ್ದಾಯಿತು. ಭಾರಿಭಾರಿಗೂ ಹೆನ್ರಿ ಎಂಬ ರಾಯನು ಜಯವಂತನೂ, ಇಲ್ಲವೇ ಶೆರೆಯವನೂ, ಆಗಿದ್ದನು. ಬ್ಲೋರ್ಹೀಥ್ (Bloreheath) ಎಂಬ ಸ್ಥಳದಲ್ಲಿ ಯೋರ್ಕಿಸ್ಟ್ಸ್ (Yorkists) ಪಾರ್ಶ್ವದವರು ಜಯಗೊಂಡರು. ವೇಕ್ಫೀಲ್ಡ್ (Wakefield) ಎಂಬ ಸ್ಥಳದಲ್ಲಿ ರೀಚರ್ಡ್ ಪಾಳ್ಯಗಾರನು ಕೊಲ್ಲಲ್ಪಟ್ಟನು.

ಪ್ರ. ಇವನು ಸತ್ತ ಮೇಲೆ ಹೆನ್ರಿ ರಾಯನಿಗೆ ನೆಮ್ಮದಿ ಆಯಿತೋ ?

ಉ. ಇಲ್ಲ. ರೀಚರ್ಡನ ಕುಮಾರನಾದ ಎದ್ವಾರ್ಡ್ ಎಂಬವನು, ವೀರ ಶೂರನಾದ ವರಿಕ್ ಎಂಬವನ ಒತ್ತಾಸೆಯಿಂದ, ತಂನ ಸ್ವತಂತ್ರವನ್ನು ಸಾಧಿಸಿದನು. ಯೋರ್ಕ್ಷೈರ್ (Yorkshire) ಇಲಾಖೆಯಲ್ಲಿರುವ ಟೌಟೋನ್ (Towton) ಎಂಬ ಪಟ್ಟದಲ್ಲಿ ಎದ್ವಾರ್ದೆಂಬವನು ಜಯ

ಗೊಂಡದ್ದಲ್ಲದೆ, ಲಂಕಾಸ್ತ್ರಿಯನ್ (Lancastrian) ಪಾರ್ಶ್ವದವರೊಳಗೆ ೪೦,೦೦೦ ಜನರಂನು ಸಂಹರಿಸಿದನು.

ಪ್ರ. ಈ ಜಯದಿಂದ ಏನು ಫಲವಾಯಿತು ?

ಉ. ಹೆನ್ರಿ ಎಂಬ ರಾಯನು ಟಾವರ್ (Tower) ಕೋಟೆಯಲ್ಲಿ ಬಂದಿಯವನಾಗಿ ಹಾಕಲ್ಪಟ್ಟನು, ಮತ್ತು ಎದ್ವಾರ್ಡೆಂಬವನು ರಾಯನ ಪಟ್ಟ ಹೊಂದಿದನು. ಅಷ್ಟರಲ್ಲಿ ಮಾರ್ಗರೆಟ್ ಎಂಬವಳೂ ಈಕೆಯ ಕುಮಾರನಾದ ಎದ್ವಾರ್ಡ್ ಎಂಬವನೂ ಫ್ಲಾಂದರ್ಸ್ (Flanders) ಸೀಮೆಗೆ ಓಡಿ ಹೋಗ ಬೇಕಾಯಿತು.

ಪ್ರ. ಎದ್ವಾರ್ಡ್ ಒವ್ ಯೋರ್ಕ್ ಎಂಬವನು ತಂನ ಸಿಂಹಾಸನವಂನು ಸಮಾಧಾನದಲ್ಲಿ ಕಾಪಾಡಿದನೋ ?

ಉ. ಇಲ್ಲ. ಇವನು ದಾಷ್ಟೀಕನಾಗಿಯೂ ಕ್ರೂರನಾಗಿಯೂ ಪೋಕರಿಯಾಗಿಯೂ ಇದ್ದದರಿಂದ ಕೊಂಚದರಲ್ಲಿ ಇವನಿಗೂ ವರಿಕ್ ಧೊರೆಗೂ ಕಿಟ್ಟು ಉಂಟಾಗಿ, ಆ ಧೊರೆಯು ಮಾರ್ಗರೆಟ್ ಎಂಬವಳಿಗೆ ಸಹಾಯ ಮಾಡಿದ್ದರಿಂದ, ಅವಳು ಜಯಗೊಂಡು ಇಂಗ್ಲಾಂಡ್ ದೇಶದಿಂದ ಎದ್ವಾರ್ಡ್ ಒವ್ ಯೋರ್ಕ್ ಎಂಬ ರಾಯನಂನು ಓಡಿಸಿದಳು.

ಪ್ರ. ಹಾಗಾದರೆ ಲಂಕಾಸ್ತ್ರಿಯನ್ ಗೋತ್ರದವರು ಗೆದ್ದರೋ ?

ಉ. ಇಲ್ಲ. ಎದ್ವಾರ್ಡ್ ರಾಯನು ತಂನ ಭಾವಮೈದನಾದ ಬರ್ಗೋಂಡಿ ಪಾಳ್ಯಗಾರನಿಂದ ಒಂದು ದಂಡು

ಕೂಡಿಸಿ, ಇಂಗ್ಲಾಂಡ್ ಸೀಮೆಗೆ ತಿರಿಗಿ ಹೋಗಿ ಬರ್ನೆತ್ (Barnet) ಎಂಬ ಸ್ಥಳದಲ್ಲಿ ಮಾರ್ಗರೆತ್ ಎಂಬವಳಿಗೆ ಜಗಳ ಕೊಟ್ಟನು. ಆಗ ಲಂಕಾಸ್ತ್ರಿಯನ್ ಗೋತ್ರದವರು ಸೋತದಲ್ಲದೆ, ಅವರ ಧೊರೆಯಾದ ವರಿಕ್ ಎಂಬವನು ಕೊಲ್ಲಲ್ಪಟ್ಟನು. ಅವನ ದೊಡ್ಡ ಅಧಿಕಾರದ ನಿಮಿತ್ತ ಜನರು ಅವನನ್ನು ರಾಯರ ಸ್ಥಾಪಕನು, ಕಿಂಗ್ ಮೇಕರ್ (King-maker) ಎಂದು ಕರೆಯುತ್ತಿದ್ದರು.

ಪ್ರ. ಅಪಜಯಪಟ್ಟ ಲಂಕಾಸ್ತ್ರಿಯನ್ ಗೋತ್ರದವರು ಏನು ಮಾಡಿದರು ?

ಉ. ಪೆಂಬ್ರೋಕ್ ಧೊರೆಯೂ ಕೊರ್ತ್ನೀ (Courtney) ಧೊರೆಯೂ ಇನ್ನು ಬೇರೆ ಕೆಲ ಪ್ರಭುಗಳೂ ಮಾರ್ಗರೆತ್ ಎಂಬ ರಾಣಿಯ ಬಳಿಗೆ ಹೋಗಿ ಇನ್ನು ಒಂದು ಜಗಳ ಮಾಡ ಬೇಕೆಂದು ಪ್ರೇರೇಪಿಸಿದರು. ಆಕೆಯು ಬರ್ನೆತ್ ಎಂಬ ಜಗಳದ ತರುವಾಯ ಬೋಲ್ಯೆ (Beaulieu) ಎಂಬ ಮಠದಲ್ಲಿ ಆಶ್ರಯ ಹುಡುಕಿದ್ದಳು.

ಪ್ರ. ಆ ಹೊಸ ಜಗಳದಲ್ಲಿ ಈಕಿಗೆ ಶುಭವಾಯಿತೋ ?

ಉ. ಇಲ್ಲ. ತ್ಯೂಕ್ಸ್ಬರಿ (Tewkesbury) ಎಂಬ ಪಟ್ಣದ ಹತ್ತಿರ ಲಂಕಾಸ್ತ್ರಿಯನ್ ಪಾರ್ಶ್ವದವರು ಲೋರ್ಡ್ ವೆಂಲೋಕ್ (Lord Wenlock) ಎಂಬವನ ಫಿತೂರಿಯಿಂದ ಇನ್ನೊಂದು ಅಪಜಯ ಪಟ್ಟರು.

ಪ್ರ. ಎಡ್ವರ್ಡ್ ಒವ್ ಯೋರ್ಕ್ ಎಂಬವನು ಜಯಗೊಂಡ ತರುವಾಯ ಏನು ಮಾಡಿದನು ?

ಉ. ಬಹು ಕ್ರೂರವಾಗಿ ನಡೆದನು. ಲಂಕಾಸ್ತ್ರಿಯನ್ ಪಾರ್ಶ್ವದವರು ಟ್ಯೂಕ್ಸ್‌ಬರಿ ದೇವಸ್ಥಾನದಲ್ಲಿ ಆಶ್ರಯಕ್ಕೆ ಹೊಕ್ಕಾಗಿದ್ದಾಗ್ಯೂ, ಅದರಲ್ಲಿಂದ ಅವರಂನು ತೆಗಿಸಿ ಸಂಹರಿಸ ಕಟ್ಟಳೆ ಮಾಡಿದನು.

ಪ್ರ. ಮಾರ್ಗರೆಟ್ ರಾಣಿಯ ಕುಮಾರನಾದ ಎಡ್ವರ್ಡೆಂಬವನ ಗತಿ ಏನಾಯಿತು ?

ಉ. ಅವನು ಎಡ್ವರ್ಡ್ ಒವ್ ಯೋರ್ಕ್ ಎಂಬ ರಾಯನ ಮುಂದೆ ಒಯ್ಯಲ್ಪಟ್ಟನು. ಮತ್ತು ರಾಯನು ಅವನನ್ನು ನೋಡಿ: "ನನ್ನ ಅಪ್ಪಣೆ ಇಲ್ಲದೆ ಯಾತಕ್ಕೆ ಇಂಗ್ಲಾಂಡ್ ಸೀಮೆಯಲ್ಲಿ ಪ್ರವೇಶಿಸಿದಿ ?" ಎಂದು ಕೇಳಲಾಗಿ, ಆ ಯುವ್ವನಸ್ಥನು ಪ್ರತ್ಯುತ್ತರವಾಗಿ: "ನನ್ನ ತಂದೆಯ ಅಪಕೀರ್ತಿ ಪರಿಹರಿಸುವದಕ್ಕೂ ನನ್ನ ರಾಜ್ಯವನ್ನು ಸ್ವೀಕರಿಸುವದಕ್ಕೂ ಬಂದಿದ್ಧೇನೆ" ಎಂತ ಹೇಳಿದ್ದರಿಂದ ರಾಯನು ಕೋಪೋದ್ರೇಕನಾಗಿ ಅವನ ಮುಖವನ್ನು ಚಪ್ಪಟೆ ಬಡಿದನು. ಆಗ ಕ್ಲಾರೆಂಸ್ (Clarence) ಮತ್ತು ಗ್ಲೋಸ್ತರ್ ಎಂಬ ಧೊರೆಗಳೂ ಹುಡುಗನ ಮೇಲೆ ಬಿದ್ದು ಅವನನ್ನು ತಿವಿದು ಕೊಂಧಾಕಿದರು.

ಪ್ರ. ಹೆನ್ರಿ ರಾಯನಿಗೂ ಇವನ ಸತಿಯಾದ ಮಾರ್ಗರೆಟ್ ಎಂಬವಳಿಗೂ ಏನು ಸಂಭವಿಸಿತು ?

ಉ. ರಾಯನು ಟಾವರ್ ಎಂಬ ಕೋಟೆಯಲ್ಲಿ ಕೊಲ್ಲಲ್ಪಟ್ಟನು. ಗ್ಲೋಸ್ತರ್ ಪಾಳ್ಯಗಾರನಾದ ರೀಚರ್ಡ್ ಎಂಬವನು ಆ ಪಾತಕವಂನು ಮಾಡಿದನಂತೆ. ಫ್ರಾನ್ಸ್

ಸೀಮೆಯ ರಾಯನು ಮಾರ್ಗರೆಟ್ ರಾಣಿಗಾಗಿ ರಣ ಕೊಟ್ಟದರಿಂದ ಅವಳಂನು ಬಿಡಿಸಿ ಕರೆದನು; ಆದಗೆ ಕೊಂಚಕಾಲದ ತರುವಾಯ ದುಃಖದಿಂದ ಸತ್ತಳು.

ಪ್ರ. ೬ನೇ ಹೆನ್ರಿ ಎಂಬವನ ರಾಜ್ಯಭಾರವು ಎಷ್ಟು ಕಾಲ ನಡೆಯಿತು ?

ಉ. ೧೪೨೨ ಸಂವತ್ಸರದಿಂದ ೧೪೬೧ ಸಂವತ್ಸರದ ಮಟ್ಟಿಗಾ ನಡೆಯಿತು.

## ೪ನೇ ಎಡ್ವಾರ್ಡ್ (Edward IV.)
### (A. D. 1461 — 1483.)

ಪ್ರ. ೪ನೇ ಎಡ್ವಾರ್ಡ್ ಎಂಬ ರಾಯನ ಆಳಿಕೆಯಲ್ಲಿ ಗುರಿಸ ತಕ್ಕದೇನು ?

ಉ. ಮೊದಲು ಲಂಕಾಸ್ತರ್ ಪಾರ್ಶ್ವದವರ ಮೇಲೆ ರಾಯನು ಬಹು ಕ್ರೂರತನ ನಡಿಸಿದನು. ಉತ್ತಮ ವಂಶದವರಿಗೆ ತಲೆ ಹೊಯಿಸುವನು; ಚಿಲ್ಲರೆ ಜನರಂನು ಗಲ್ಲಿಗೆ ಹಾಕಿಸುವನು.

ಪ್ರ. ಆ ರಾಯನ ಗುಣವೂ ದೌಲತ್ತೂ ಹ್ಯಾಗಿತ್ತು?

ಉ. ಇವನ ಸ್ವಭಾವವಾದ ಗುಣವು ನಿಷ್ಠೂರವಾಗಿಯೂ ಪೋಕರಿಯಾಗಿಯೂ ಇದ್ದದರಿಂದ ತಂನ ಅಧಿಕಾರವಂನು ನೀತಿ ಇಲ್ಲದೆ ಕ್ರೂರತನವಾಗಿ ಪ್ರಯೋಗಿಸುತ್ತಾಯಿದ್ದನು.

ಪ್ರ. ಆ ರಾಯನು ತನ್ನ ಸಹೋದರನಾದ ಕ್ಲಾರೆನ್ಸ್ ಪಾಳ್ಯಗಾರನನ್ನು ಮರಣಕ್ಕೆ ನಿರ್ಣಯಿಸಿದನೋ?

ಉ. ಹೌದು. ಅವನು ಟಾವರ್ ಎಂಬ ಕೋಟೆಯಲ್ಲಿ ಸಂಹರಿಸಲ್ಪಟ್ಟನು. ಮತ್ತು ದ್ರಾಕ್ಷೀರಸದ ಒಂದು ಪೀಪಾಯೊಳಗೆ ಮುಣಿಗಿಸಲ್ಪಟ್ಟು ಸತ್ತನೆಂದು ಕೆಲವರು ಹೇಳುತ್ತಾರೆ.

ಪ್ರ. ೪ ನೇ ಎಡ್ವರ್ಡೆಂಬವನು ಜಾಸ್ತಿ ಕಂದಾಯ ಜನರ ಮೇಲೆ ಹೊರಿಸಿದನೋ?

ಉ. ಹೌದು. ಮತ್ತು ಉಚಿತಾರ್ಥವಾದ ಕಾಣಿಕೆ ಎಂಬ ಹೆಸರನ್ನಿಟ್ಟು, ಜನರಿಂದ ಅಂಥಾ ಕಂದಾಯವನ್ನು ತೆಗಿಯುತ್ತಾ ಇದ್ದನು. ನೇಮಿಸುವ 'ರಾಯನ ಚಿತ್ತವೇ ಹೊರತು ಅಂಥ ಕಂದಾಯಕ್ಕೆ ಬೇರೆ ಪ್ರಮಾಣವಿರಲಿಲ್ಲ.

ಪ್ರ. ೪ ನೇ ಎಡ್ವರ್ಡ್ ರಾಯನು ಎಷ್ಟನೇ ಪ್ರಾಯದಲ್ಲಿ ಸತ್ತನು?

ಉ. ೪೨ ಪ್ರಾಯದಲ್ಲಿಯೇ; ಭೋಜನಪ್ರಿಯವು ಅವನ ಮರಣಕ್ಕೆ ಕಾರಣವಾಯಿತು. ಅವನು ೧೪೬೧ ವರುಷದಿಂದ ೧೪೮೩ ನೇಯದರ ವರೆವಿಗೂ ಆಳಿದನು.

## ೫ ನೇ ಎಡ್ವರ್ಡ್. (Edward V.) (1483—1483.)

ಪ್ರ. ೪ ನೇ ಎಡ್ವರ್ಡೆಂಬ ರಾಯನಿಗೆ ಬದಲಾದವನ್ಯಾರು?

ಉ. ಇವನ ಕುಮಾರನಾದ ೫ ನೇ ಎಡ್ವಾರ್ಡೆಂಬವನೇ. ತಂದೆ ತೀರಿಹೋಗುವ ವೇಳೆಯಲ್ಲಿ ಬಾಲಕನು ಒಳ್ಳದೇಶದಲ್ಲಿದ್ದನು. ಅವನು ಲೊಂಡನ್ ನಗರಕ್ಕೆ ಬರುವ ಸಮಯದಲ್ಲಿ, ಗ್ಲೋಸ್ತರ್ ಪಾಳ್ಯಗಾರನು ಒಬ್ಬ ಬಾಲಕನಿಂದ ರಾಜ್ಯಭಾರವನ್ನು ಕಿತ್ತುಕೊಳ್ಳ ಸುಲಭವೆಂದೆಣಿಸಿ, ದಾರಿಯಲ್ಲಿ ಅವನನ್ನು ಹಿಡಿದು ತಾವರ್ ಎಂಬ ಕೋಟೆಯಲ್ಲಿ ಸೆರೆಯವನಾಗಿ ಇರಿಸಿದನು.

ಪ್ರ. ಆ ಬಳಿಕ ಗ್ಲೋಸ್ತರ್ ಪಾಳ್ಯಗಾರನಾದ ರೀಚರ್ಡ್ ಎಂಬವನು ಏನು ಮಾಡಿದನು?

ಉ. ಇವನ ವಂಚನೆಯನ್ನು ಅರಿಯುತ್ತಿದ್ದ ಸತ್ತ ರಾಯನ ಹೆಂಡತಿಯು ತನ್ನ ಕುಮಾರ್ತೆಗಳೊಂದಿಗೂ ಕಿರಿ ಮಗನಾದ ರೀಚರ್ಡೆಂಬ ಯೋರ್ಕ್ ಪ್ರಧಾನಿಯೊಂದಿಗೂ ವೆಸ್ತ್ಮಿನ್ಸ್ತರ್ (Westminster) ದೇವಸ್ಥಾನದಲ್ಲಿ ಆಶ್ರಯಿಸಿ ಇದ್ದಳು. ಗ್ಲೋಸ್ತರ್ ಪಾಳ್ಯಾಗಾರನು ಅಲ್ಲಿಗೆ ಹೋಗಿ, ಮತ್ತು ತಾನು ರಾಜ್ಯಕ್ಕೆ ಪಾಲಿಕನೆಂಬ ಖಿಥಾಬು ಹೊಂದಿದ್ದರಿಂದ ಕಡ್ಡಾಯ ಮಾಡಿ, ಆ ನಿರ್ಭಾಗ್ಯಸ್ತಳಾದ ತಾಯಿಯ ಕೈಯೊಳಗಿಂದ ತನ್ನ ಕಿರಿ ಮಗನನ್ನು ಕಿತ್ತುಕೊಂಡನು.

ಪ್ರ. ಆ ಮೇಲೆ ಏನು ಮಾಡಿದನು?

ಉ. ಹೀಗೆ ಬಾಲಕನಾದ ರಾಯನನ್ನೂ ಇವನ ತಮ್ಮನನ್ನೂ ತನ್ನ ವಶದಲ್ಲಿ ಇರಿಸಿಕೊಂಡ ತರುವಾಯ, ಅವರ ನಂಬಿಕೆಯುಳ್ಳ ಸೇವಕರನ್ನು ತಳ್ಳ ಯೋಚಿಸಿದನು.

ಅದೇ ಅಭಿಪ್ರಾಯದಿಂದ ವ್ಯರ್ಥವಾದ ನೆವನದಿಂದ ಲೊರ್ಡ್ ಹೇಸ್ತಿಂಗ್ಸ (Lord Hastings) ಎಂಬವನನ್ನು ಕೊಲ್ಲಿಸಿದನು.

ಪ್ರ. ರೀಚರ್ಡೆಂಬವನಿಗೆ ಸಹಾಯಕನಾಗಿ ಯಾವನೊಬ್ಬ ದೊಡ್ಡ ಪ್ರಭು ಇದ್ದನೋ?

ಉ. ಹೌದು, ಬಹು ಸಾಮರ್ಥ್ಯವೂ ಯುಕ್ತಿಯೂ ಅದ ಬಕ್ರಿಂಘಂ (Buckingham) ಪಾಳ್ಯಗಾರನೇ. ಇವನು ರೀಚರ್ಡೆಂಬವನಿಗೆ ಒತ್ತಾಸೆಯಾಗಿ ಸೆಂತ್ ಪೋಲ್ಸ ಕ್ರೊಸ್ (St. Paul's Cross) ಎಂಬ ಸ್ಥಳದಲ್ಲಿ ಪಟ್ಣವಾಸಿಗಳಿಗೆ ಬುದ್ಧಿ ಹೇಳಿ, ಅವರಲ್ಲಿದ್ದಂಥಾ ಮುಖ್ಯಸ್ತರೂ ಗೌಡರಾ ರೀಚರ್ಡನಿಗೆ ಕಿರೀಟ ಒಪ್ಪಿಸುವ ಹಾಗೆ ಪ್ರೇರೇಪಿಸಿದನು. ಅವರು ಹಾಗೆ ಮಾಡುವಲ್ಲಿ, ಕಪಟಸ್ಥನಾದ ರೀಚರ್ಡ್ ಮೊದಲು ನಿಷೇಧಿಸುವಪ್ಪಂದ ಹುಚೇಷ್ಟೆ ಮಾಡಿದಾಗ್ಯೂ, ಕಡೆಯಲ್ಲಿ ಒಪ್ಪಿಕೊಂಡನು.

---

## ೩ ನೇ ರೀಚರ್ಡ್ (Richard III.)

(A. D. 1483 — 1485.)

---

ಪ್ರ. ರೀಚರ್ಡೆಂಬ ರಾಯನು ತನ್ನ ರಾಜ್ಯಭಾರವನ್ನು ಸಮಾಧಾನದಲ್ಲಿ ಅನುಭವಿಸಿದನೋ?

ಉ. ಇಲ್ಲ. ಅನೇಕ ಪ್ರಜೆಗಳು ತನ್ನ ದೌಲತ್ತು ವಿರೋಧಿಸುತ್ತಾರೆಂದು ತಿಳಿದು, ತಾವರೆಂಬ ಕೋಟೆ

ಯಲ್ಲಿ ಶೆರೆಯಾಗಿದ್ದಂಥಾ ಎಡ್ವಾರ್ಡ್ ಮತ್ತು ರೀಚರ್ಡ್ ಎಂಬ ಇಬ್ಬರು ಬಾಲಕರಂನು ಕೊಂಧಾಕುವಂತೆ ಸರ್ ಥೋಮಸ್ ಬ್ರಕೇನ್ಬರಿ (Sir Thomas Brackenbury) ಎಂಬವನಿಗೆ ಕಟ್ಟಳೆ ಮಾಡಿದನು.

ಪ್ರ. ಆ ಧೊರೆಯು ಆಜ್ಞೆ ಪ್ರಕಾರ ನಡೆದನೋ ?

ಉ. ಇಲ್ಲ. ಆದರೆ ಇನ್ನೊಬ್ಬ ಧೊರೆಯಾದ ಸರ್ ಜೇಂಸ್ ತಿರ್ರೇಲ್ (Sir James Tyrrell) ಅದಕ್ಕೆ ಒಪ್ಪಿಕೊಂಡು ಇಬ್ಬರು ಬಾಲಕರಂನು ಸಂಹರಿಸಿದನು.

ಪ್ರ. ಅಂಥಾ ಕ್ರೂರತನದಿಂದ ರೀಚರ್ಡ್ ರಾಯನಿಗೆ ಏನೊಂದು ಪ್ರಯೋಜನ ಬಂತೋ ?

ಉ. ಇಲ್ಲ. ಈ ಪರಿಯಂತರಕ್ಕೂ ರಾಯನಿಗೆ ಸಹಾಯಕನಾಗಿದ್ದ ಬಕ್ಕಿಂಘಂ ಎಂಬ ಪಾಳ್ಯಗಾರನು ಸಿಟ್ಟುಮಾಡಿಕೊಂಡು ದಂಡೆತ್ತಿ ಕಲಹ ಎಬ್ಬಿಸಿದನು. ಆವಾಗ್ಯೂ ಇವನು ಜಯಿಸಲ್ಪಟ್ಟು, ರಾಯನ ಕೈಯಲ್ಲಿ ಸಿಕ್ಕಿಕೊಂಡು, ಸಾಲಿಸ್ಬರಿ (Salisbury) ಎಂಬ ಸ್ಥಳದಲ್ಲಿ ಕೊಲ್ಲಲ್ಪಟ್ಟನು.

ಪ್ರ. ಆಗ ಇಂನೊಬ್ಬ ಪ್ರಧಾನಿಯು ತಾನು ರಾಜ್ಯಭಾರಕ್ಕೆ ಬಾಧ್ಯಸ್ತನೆಂದು ಹೇಳಿಕೊಂಡದ್ದರಿಂದ ರೀಚರ್ಡ್ ರಾಯನಿಗೆ ನೂತನವಾದ ಚಿಂತೆಯಾಯಿತೋ ?

ಉ. ಹೌದು. ರಿಚ್ಮೊಂಡ್ (Richmond) ಪಾಳ್ಯಗಾರನಾದ ಹೇನ್ರಿ ತ್ಯುದೊರ್ (Henry Tudor) ಎಂಬವನು ತಂನ ತಾಯ್ಯ ಕಡೆಯಿಂದ ೩ ನೇ ಎಡ್ವಾರ್ಡ್ ಎಂಬ ರಾಯನ ಸಂತತಿಯವನಾಗಿ ಇರುತ್ತಿದ್ದನು. ಯೋ

కిఱన్త్ పార్టీదవరు మేల్గోళ్ళువ కాలదల్లి, అవను ఇంగ్లాండ్ సీమెయన్ను బిట్టు దేశాంతరవాగి హోగిద్దను. రీచర్డెంబ రాయనిగె అనేకరు విరోధవాగిద్దారెందు అరితుకొండు, లంకాస్త్రియర్ పార్టీదవరు ఇవనన్ను ఇంగ్లాండ్ దేశక్కె తిరిగి కరెదరు.

ప్ర. ఇవను ఎల్లి ప్రవేశ మాడిదను ?

ఉ. వేల్స్ సీమెగె శేరిద మిల్ఫోర్డ్ హేవర్ (Milford haven) ఎంబ రేవినల్లియే. మొదలు ఇవనన్ను శేరిదవరు ౨,౦౦౦ మందిగళిగింతా హెచ్చాగిరలిల్ల; ఆదరె బరబర అవన దండు హెచ్చితు. జగళదల్లి సమర్థనాగియూ ధైర్యస్తనాగియూ ఇద్ద రీచర్డ్ రాయను హెన్రి ఎంబవనన్ను ఎదురిసబందను. బోస్వొర్థ్ (Bosworth) ఎంబ హోలగళల్లి ఎరడు దాణువెగళు యుద్ధ మాడలాగి రీచర్డెంబ రాయను బరు దృఢవాగి హోరాడిదాగ్యూ కడేలి కొల్లల్పట్టను. అవనిగె బదలాగి హెన్రి ఎంబవను యుద్ధరంగదల్లియే రాయనాగి నేమిసల్పట్టను. రీచర్డెంబవను ౨ వరుష మాత్రవే ఆళికొండిద్దను.

## ೭ ನೇ ಹೆನ್ರಿ. (Henry VII.)

## (A. D. 1485 — 1509)

---

ಪ್ರ. ಹೆನ್ರಿ ಎಂಬವನು ತನ್ನ ಗುಣದಿಂದ ಪ್ರಜೆಗಳ ಪ್ರೀತಿಯನ್ನು ಸಂಪಾದಿಸಿದನೋ ?

ಉ. ಇಲ್ಲ. ಇವನು ಮುರ್ಮೈಯಾಗಿಯೂ ಖಂಡಿತನಾಗಿಯೂ ಇದ್ದದರಿಂದಲೂ, ತಾನು ದೇಶಾಂತ್ರದಲ್ಲಿ ಮದಿವೆ ಮಾಡಿಕೊಂಡಿದ್ದಂಥಾ ತನ್ನ ಸತಿಯಾದ ಎಲಿಸಬೆಥ್ (Elizabeth) ಎಂಬವಳನ್ನು ನಿಷ್ಟುರವಾಗಿ ನಡಿಸಿದ್ದರಿಂದಲೂ, ಜನರು ಅವನನ್ನು ಹೇಸಿಕೊಳ್ಳಲಾರಂಭಿಸಿದರು. ಮತ್ತು ಬರಬರ ಪ್ರಜೆಗಳಿಗೆ ಅಸಂರ್ಯ ಉಂಟಾಗಿ, ರಾಯನ ಮೇಲೆ ಒಂದು ಕಲರುವೆಬ್ಬಿಸಿದರು.

ಪ್ರ. ಹೆನ್ರಿ ಎಂಬ ರಾಯನ ರಾಜಾಧಿಕಾರದ ಮೇಲೆ ಮೊದಲು ಆಶೆ ಪಟ್ಟವನ್ಯಾರು ?

ಉ. ಒಬ್ಬ ರೊಟ್ಟಿಕಾರನ ಮಗನಾದ ಲಂಬೆರ್ಟ್ ಸಿಮ್ನೆಲ್ (Lambert Simnel) ಎಂಬವನೇ. ಇವನು ಒಕ್ಸ್‌ಫೋರ್ಡ್ ಪಟ್ಟಣದ ಗುರುಗಳಾದ ಸ್ಪೈಮೋರ್ ಎಂಬವರ ಒತ್ತಾಸೆಯಿಂದ ಪ್ರಜೆಗಳಿಗೆ ಮೋಸಗೊಳಿಸಿ, ತಾನು ದ್ಯೂಕ್ ಒವ್ ಕ್ಲಾರೆಂಸ್ ಎಂಬವನ ಮಗನಾಗಿಯೂ ಆ ಬಾಬತಿನಿಂದ ಕಿರೀಟಕ್ರೆ ಬಾಧ್ಯಸ್ತನಾಗಿಯೂ ಇಧ್ಧೇನೆಂತ ಹೇಳಿಕೊಳ್ಳುತ್ತಾ ಇದ್ದನು.

ಪ್ರ. ತನಗೆ ಸಹಾಯ ಮಾಡುವ ಬಗ್ಯೆ ಸಿಮ್ನೆಲ್

ಎಂಬವನು ಅನೇಕ ಪ್ರಜೆಗಳಂನು ಸೇರಿಸಿಕೊಂಡಿದ್ದನೋ?

ಉ. ಹೌದು. ಆದರೆ ಹೆನ್ರಿ ಎಂಬ ರಾಯನು ಸೆರೆಯಲ್ಲಿದ್ದ ಕ್ಲಾರೆಂಸ್ ಧೊರೆಯ ನಿಜ ಮಗನಂನು ಬಿಡಿಸಿ, ಲೊಂಡನ್ ನಗರದ ಸಮಸ್ತ ಬೀದಿಗಳಲ್ಲಿ ತಿರಿಗಿಸಿದರಿಂದ, ಸಿಮ್ನೆಲೆಂಬವನ ಪಿತ್ತಲಾಟವು ಎಲ್ಲರಿಗೆ ತಿಳಿಯ ಬಂತು. ಅವನು ಸಹಾ ಕೊಂಚದರಲ್ಲಿ ಹಿಡಿಯಲ್ಪಟ್ಟು, ಮಾಫು ಕೇಳಿದ ತರುವಾಯ, ರಾಯನ ಅರಮನೆಯ ಜೀತಕಾರರೊಳಗೆ ಸೇರಿಸಲ್ಪಟ್ಟನು.

ಪ್ರ. ಆ ಕಾಲದಲ್ಲಿ ಇನ್ನೊಂದು ಗುಬಾರು ಆಯಿತೋ?

ಉ. ಹೌದು. ಹೆನ್ರಿಯೆಂಬ ರಾಯನು ಲೋಭಿಯಾಗಿದ್ದ ನಿಮಿತ್ತ ಜನರ ಮೇಲೆ ಹೆಚ್ಚಾದ ತೆರಿಗೆಯಂನು ಹೊರಿಸಿದನು. ಆಗ ಯೋರ್ಕ್ ಇಲಾಖೆಯ ನಿವಾಸಿಗಳು ಅಂಥಾ ಜಾಸ್ತಿಯಂನು ತಾಳಿಕೊಳ್ಳದೆ, ಕಲಹ ಎಬ್ಬಿಸಿದರು.

ಪ್ರ. ಕಡೇಲಿ ಏನು ಸಂಭವಿಸಿತು?

ಉ. ಕಲಹಕಾರರು ಪರಿಭೇದವಾಗಿ ಜಯಿಸಲ್ಪಟ್ಟದ್ದಲ್ಲದೆ, ಅವರ ಗುರಿಕಾರನಾದ ಸರ್ ಜೋನ್ ಎಗ್ರಿಮೊಂಟ್ (Sir John Egremont) ಎಂಬವನು ಬರ್ಗೊಂದಿ ಸೀಮೆಯ ಪಾಳ್ಯಗಾರನ ಬಳಿಗೆ ದೇಶಾಂತರವಾಗಿ ಓಡಿಹೋಗ ಬೇಕಾಗಿತ್ತು.

ಪ್ರ. ಇದಕ್ಕಿಂತಾ ಘನವಾದ ದಂಗೆಯು ಉಂಟಾಗಲಿಲ್ಲವೋ?

ಉ. ಕೂಡದು. ಪೆರ್ಕಿನ್ ವಾರ್ಬೆಕ್ (Perkin Warbeck) ಎಂಬವನೊಬ್ಬನು ತಾವರ್ ಕೋಟೆಯಲ್ಲಿ ಕೊಲ್ಲಲ್ಪಟ್ಟ ಯೋರ್ಕೆಂಬ ಪ್ರಧಾನಿಯ ನಾಮವನ್ನು ಸ್ವೀಕರಿಸಿ, ೩ ನೇ ರಿಚರ್ಡೆಂಬ ರಾಯನ ನಿಷ್ಠುರ ಆಜ್ಞೆಗೆ ತಪ್ಪಸಿದವನ ಹಾಗೆ ತನ್ನನ್ನು ತೋರಿಸಿಕೊಳ್ಳುತ್ತಿದ್ದನು.

ಪ್ರ. ಕೆಲ ಧೊರೆಗಳು ಇವನಿಗೆ ಕುಮಕು ಮಾಡಿದರೋ?

ಉ. ಬರ್ಗೋಂದಿ ಪಾಳ್ಯಗಾರನ ಸತಿಯೂ ಸ್ಕೊತ್ಲಾಂಡ್ ಸೀಮೆಯ ರಾಯನಾದ ೪ ನೇ ಜೇಂಸ್ ಎಂಬವನೂ ವಿಶೇಷವಾಗಿ ಅವನಿಗೆ ಕುಮಕು ಮಾಡಿದರು. ಈತನು ಆ ಪೆರ್ಕಿನ್ ಎಂಬವನಿಗೆ ತನ್ನ ನೆಂಟಸ್ಥಳಾದ ಕಥೆರಿನ್ ಗೊರ್ದನ್ (Catherine Gordon) ಎಂಬ ಧೊರೆಸಾನಿಯನ್ನು ಮದಿವೆ ಮಾಡಿಸಿದನು.

ಪ್ರ. ಕಡೆಯಲ್ಲಿ ಪೆರ್ಕಿನೆಂಬವನ ಪ್ರಯತ್ನವು ಏನಾಯಿತು?

ಉ. ಅನರ್ಥವಾಗಿ ಹೋಯಿತು. ಇಂಗ್ಲಾಂಡ್ ಮತ್ತು ಕೊರ್ನ್ವಲ್ (Cornwall) ದೇಶಗಳ ನಿವಾಸಿಗಳು ಅವನಿಗೆ ಸಹಾಯ ಮಾಡಿದಾಗ್ಯೂ, ಇವನು ಎಗ್ಸೆತರ್ (Exeter) ಎಂಬ ಪಟ್ಟಣಕ್ಕೆ ಮುತ್ತಿಗೆ ಹಾಕುವಾಗ ಅಪಜಯ ಪಟ್ಟದ್ದರಿಂದ, ಬೋಲ್ಯೆ ಎಂಬ ಸನ್ಯಾಸಿ ಮಠದಲ್ಲಿ ಅವನು ಆಶ್ರಯ ಹುಡುಕ ಬೇಕಾಯಿತು. ಆದರೆ ಸ್ವಲ್ಪದರೊಳಗೆ ರಾಯನ ವಶದಲ್ಲಿ ತನ್ನನ್ನು ತಾನೇ ಒಪ್ಪಿಸಿಕೊಟ್ಟನು.

ಪ್ರ. ಅವನ ಗತಿ ಎಂಥಾದ್ದಾಯಿತು ?

ಉ. ಅವನು ಪರಿಹಾಸ್ಯವಾಗಿ ಡಂಭ ಒಡ್ಡೋಲಗ ದಲ್ಲಿ ಕರೆಕೊಂಡುಹೋಗಲಟ್ಟು, ಲೊಂಡನ್ ನಗರದ ಬೀದಿಗ ಳೊಳಗೆ ಜನರಿಂದ ಎಳ್ಕರಿಸಲಟ್ಟು, ಕಡೆಯಲ್ಲಿ ತೈಬರ್ನ್ (Tyburn) ಎಂಬ ಸ್ಥಳದಲ್ಲಿ ಗಲ್ಲಿಗೆ ಹಾಕಲಟ್ಟನು.

ಪ್ರ. ಹೆನ್ರಿ ರಾಯನು ಎರ್ಲ್ ಒವ್ ವರಿಕ್ (Earl of Warwick) ಎಂಬ ಧೊರೆಗೆ ಏನು ಮಾಡಿದನು ?

ಉ. ಆ ಧೊರೆಯು ವಾರ್ಬೆಕ್ ಎಂಬವನೊಂದಿಗೆ ತಾವರ್ ಕೋಟೆಯಲ್ಲಿ ಇದ್ದಾಗ ಅನ್ಯೋನ್ಯವಾಗಿದ್ದನೆಂ ದೂ ಶರೆಮನೆಯಿಂದ ತಪ್ಪಿಸಿಕೊಂಡುಹೋಗುವದಕ್ಕೆ ಉಪಾ ಯ ನೋಡಿ ಇದ್ದನೆಂದೂ ಹೇಳಿ, ಹೆನ್ರಿ ರಾಯನು ಎರ್ಲ್ ಒವ್ ವರಿಕ್ ಎಂಬವನಿಗೆ ತಲೆ ಹೊಯಿಸಿದನು.

ಪ್ರ. ಹೆನ್ರಿ ಎಂಬವನ ಗುಣವು ಎಂಥಾದ್ದಾಗಿತ್ತು ?

ಉ. ಕ್ರೂರನಾಗಿಯೂ ಲೋಭಿಯಾಗಿಯೂ ಇದ್ದ ದಲ್ಲದೆ, ಕೊರತೆ ಇಲ್ಲದಂಥ ಪುಣ್ಯವು ಒಂದಾದರೂ ಅವ ನಿಗಿರಲಿಲ್ಲ. ಮರ್ಯಾದೆಯಾಗಿಯೂ, ನಂಬಿಕೆಯೂ ಮೇ ಲರಿಯುವ ಗುಣವೂ ಇಲ್ಲದವನಾಗಿಯೂ, ಇರುತ್ತಿದನು. ೫೨ ನೇ ಪ್ರಾಯದವನಾಗಿ ಸತ್ತನು. (೧೫೦೯.)

## ೮ನೇ ಹೆನ್ರಿ. (Henry VIII.)

### (A. D. 1509—1546)

---

ಪ್ರ. ೮ನೇ ಹೆನ್ರಿ ಎಂಬವನು ಸಿಂಹಾಸನ ಏರುವಾಗ, ಜನರ ಭಾವನೆಗಳು ಇವನ ಉದ್ದೇಶ್ಯದಲ್ಲಿ ಹ್ಯಾಗೆ ಇದ್ದವು?

ಉ. ಬರೀ ಪ್ರೀತಿಯುಳ್ಳ ಭಾವನೆಗಳು ಎಲ್ಲರ ಮನಸಿನಲ್ಲಿದ್ದವು. ಯಾಕೆಂದರೆ ಖಂಡಿತನೂ ಲೋಭಿಯೂ ಆದ ಪೂರ್ವ ರಾಯನಿಗೆ ಬದಲಾಗಿ ಸಂತೋಷವೂ ಉದಾರತ್ವವೂ ಸೌಂದರ್ಯವೂ ಆದ ರಾಯನು ದೊರಕುವನೆಂದು ನಂಬಿಕೊಂಡಿದ್ದರು.

ಪ್ರ. ಆ ಕಾಲದಲ್ಲಿ ದೊಡ್ಡ ಯುದ್ಧ ಉಂಟಾಯಿತೋ?

ಉ. ಹೌದು. ಫ್ಲೊದ್ದನ್ (Flodden) ಎಂಬ ಸ್ಥಳದಲ್ಲಿ ಸ್ಕೊತ್ ದೇಶಸ್ತರಿಗೂ ಇಂಗ್ಲಿಷ್ ದೇಶಸ್ತರಿಗೂ ಲಡಾಯಿ ಉಂಟಾಗಿ, ಸ್ಕೊತರು ಅಪಜಯ ಪಟ್ಟಿದ್ದಲ್ಲದೆ, ಅವರ ರಾಯನಾದ ೪ನೇ ಜೇಂಸ್ ಎಂಬವನು ಕೊಲ್ಲಲ್ಪಟ್ಟನು.

ಪ್ರ. ಹೆನ್ರಿ ಎಂಬವನ ರಾಜ್ಯಭಾರದಲ್ಲಿ ನಡೆದ ಮುಖ್ಯವಾದ ವೃತ್ತಾಂತಗಳ್ಯಾವವು?

ಉ. ೧ನೇದು. ಜೆರ್ಮನಿ ಸೀಮೆಯಲ್ಲಿ ೧೫೧೭ ಇಸವಿ, ಮಾರ್ತಿನ್ ಲೂಥೆರ್ (Martin Luther) ಎಂಬ ಪತಿತನು ಕಾಣಿಸಿದ್ದೂ; ೨ನೇದು. ಹೆನ್ರಿ ಎಂಬವನು

ತಂನ ಸತಿಯಾದ ಕಥೆರಿನ್ ಒಫ್ ಅರಗೊನ್ (Catherine of Arragon) ಎಂಬವಳಂನು ಅರೋಚಿಕೆ ಮಾಡಿ ತ್ಯಜಿಸಿದ್ದೂ, ಅದರಿಂದ ಪಾಪುಸ್ವಾಮಿಯವರೊಂದಿಗೆ ವ್ಯವಹಾರವಾಡಿದ್ದೂ, ಕಥೋಲಿಕ್ (Catholic) ಸತ್ಯ ವೇದವಂನು ಬಿಟ್ಟದ್ದೂ (೧೫೩೪); ೩ ನೇದು. ಅವನು ಸನ್ಯಾಸಿ ಮಠಗಳಂನು ತೆಗದು ಹಾಕಿ ಅವರ ಒಡವೆ ಮಾನ್ಯಗಳೆಲ್ಲಾ ಅಪಹರಿಸಿದ್ದೂ, ಇಂಗ್ಲಾಂಡ್ ಸೀಮೆಯಲ್ಲಿ ಹಿಂಸೆವೂ ಕಳ್ಳವೂ ಆದ ಮತಾಚಾರವು ವ್ಯಾಪಿಸಿದ್ದೂ, ಇವು ಪ್ರಧಾನ ವೃತ್ತಾಂತಗಳೇ.

ಪ್ರ. ಮಾರ್ತಿನ್ ಲೂಥೆರೆಂಬವನ್ಯಾರು?

ಉ. ಆಗಸ್ತಿನ್ (Augustine) ಸಭೆಯ ಸನ್ಯಾಸಿಯೂ ವಿತ್ತೆಂಬರ್ಗ್ (Wittemburg) ಪಟ್ಣದ ವಿದ್ಯಾಶಾಲೆಯಲ್ಲಿ ಪಾಠೈಸುವವನೂ ಆಗಿದ್ದ ಒಬ್ಬ ಗುರುವೇ.

ಪ್ರ. ಲೂಥೆರೆಂಬವನು ಪಾಪು ಸ್ವಾಮಿಯವರಂನು ಎದುರಿಸಿದ್ದು ಯಾತಕ್ಕೆ?

ಉ. ೧೦ ನೇ ಲೆಯೊ (Leo X) ಎಂಬ ಪಾಪು ಸ್ವಾಮಿಯವರು ರೋಮ್ (Rome) ಪಟ್ಣದಲ್ಲಿ ಅಬ್ಯನ್. ರಾಯಪ್ಪನವರ ಆಡಂಬರವಾದ ದೇವಸ್ಥಾನವಂನು ಮುಗಿಸುವ ಬಗ್ಯೆ ಕ್ರೀಸ್ತುವರ ಒತ್ತಾಸೆಯಂನು ಕೇಳಿ ಇದ್ದರು. ಇಂಥಾ ಧರ್ಮದ ಕಾರ್ಯಕ್ಕೆ ಸಹಾಯ ಕೊಟ್ಟು ಒಳ್ಳೇ ಪಾಪಸಂಕೀರ್ತನ ಮಾಡುವವರಿಗೆ ಜ್ಞಾನ ಫಲಗಳಂನು ನೇಮಿಸಿದಲ್ಲದೆ, ಅಂಥಾ ಅನುಗ್ರಹವಂನು ಕ್ರೀಸ್ತುವರಿಗೆ ಪ್ರಸಿದ್ಧ ಮಾಡುವ

ದಕ್ಕೋಸ್ಕರ ಜೆರ್ಮನಿ ದೇಶದಲ್ಲಿ ದೊಮಿನಿಕ್ (Dominican) ಸನ್ಯಾಸಿಗಳಿಂದು ಮಾರಿರಾರು ಮಾಡಿದರು. ಆಗ ಸ್ತೆನೆಂಬ ತಂನ ಸಭೆಯು ಏರ್ಪಡಿಸಲ್ಪಡದ ನಿಮಿತ್ತ ಲೂಥೇರೆಂಬವನು ರೋಷಪಟ್ಟು, ಪಾಪು ಸ್ವಾಮಿಯವರಂನು ದೂಷಿಸಲೂ ಸತ್ಯ ವೇದಕ್ಕೆ ವಿರೋಧವಾದ ಅಬದ್ಧಗಳ ಬೋಧಿಸಲೂ ತೊಡಗಿದನು.

ಪ್ರ. ಲೂಥೆರ್ ಎಂಬವನು ತಂನ ದುರ್ಮತವಂನು ಜೆರ್ಮನಿ ಸೀಮೆಯಲ್ಲಿ ಪ್ರಬಲ ಮಾಡುವ ಸಮಯದಲ್ಲಿ ಹೆನ್ರಿ ಎಂಬ ರಾಯನು ಏನು ಮಾಡಿದನು ?

ಉ. ಸತ್ಯವೇದವ ಕಾಪಾಡುವ ಹಾಗೆ ಏಳು ದೇವ ದ್ರವ್ಯ ಅನುಮಾನಗಳ ಕುರಿತು ಒಂದು ತರ್ಕದ ಗ್ರಂಥ ವಂನು ಅವನು ಬರೆದದರಿಂದ ಪಾಪು ಸ್ವಾಮಿಯವರು ಅವ ನಂನು ಗೌರವಿಸುವದಕ್ಕೋಸ್ಕರ ಅವನಿಗೆ ದೇವ ವಿಶ್ವಾಸದ ಪಾಲಿಕನೆಂಬ ನಾಮಾಂಕಿತವಂನು ನೇಮಿಸಿದರು.

ಪ್ರ. ಹೆನ್ರಿ ಎಂಬವನು ಅಂಥಾ ಭಕ್ತಿ ಚುರುಕು ಬಹು ಕಾಲದ ವರಿವಿಗೂ ತೋರಿಸಿಕೊಂಡನೋ ?

ಉ. ಇಲ್ಲ. ತಂನ ಅಂಣನ ಹೆಂಡತಿ ಮದಿವೆ ಮಾಡಿಕೊಂಡದ್ದರಿಂದ ತಾನು ಭಯಪಡುತ್ತೇನೆಂಧೇಳಿ, ಕಥೆರಿನ್ ಒವ್ ಅರಗೊನ್ ಎಂಬ ತಂನ ಸತಿಯಂನು ಪರಿತ್ಯಾಗ ಮಾಡ ಪಾಪು ಸ್ವಾಮಿಯವರಿಂದ ಅಪ್ಪಣೆ ಕೇಳಿದನು.

ಪ್ರ. ಪಾಪು ಸ್ವಾಮಿಗಳು ಅಂಥಾ ಅಪ್ಪಣೆಯಂನು ಪಾಲಿಸಿದರೋ ?

ಉ. ಇಲ್ಲ. ಪಾಪು ಸ್ವಾಮಿಯವರು ಅಂಥಾ ಮದುವೆಯಲ್ಲಿ ಹೋರತೆ ಇಲ್ಲವೆಂತ ತೀರ್ಪು ಮಾಡಿ, ರಾಯನು ಕೇಳಿದ ಅಪ್ಪಣೆ ನಿಷೇಧಿಸಿದರು. ಅದರಿಂದ ರಾಯನು ಕೋಪವಂಗೊಂಡು ಪಾಪು ಸ್ವಾಮಿಗಳ ಅಧಿಕಾರವನ್ನು ಜೊಂಕಿ, ಇಂಗ್ಲಾಂಡ್ ಸೀಮೆಯೆಲ್ಲಾ ಮತ ವಿಭಾಗದಲ್ಲಿ ಸೇರಿಸಿ, ತನ್ನನ್ನು ಕ್ರೀಸ್ತುವರಿಗೆ ಜ್ಞಾನ ಅಧಿಕಾರಿಯಾಗಿ ನೇಮಿಸಿಕೊಂಡನು.

ಪ್ರ. ಆ ಕಾಲದಲ್ಲಿ ಹೆನ್ರಿ ಎಂಬ ರಾಯನಿಗೆ ಇದ್ದ ಪ್ರಧಾನ ಮಂತ್ರಿ ಯಾರು?

ಉ. ತನ್ನ ಬುದ್ಧಿಯಿಂದಲೂ ತನ್ನ ಅಧಿಕಾರದಿಂದಲೂ ಹೆಸರುಗೊಂಡಂಥಾ ವೂಲ್ಸಿ (Wolsey) ಎಂಬ ಕಾರ್ಡಿನಲ್ (Cardinal) ಮೇತ್ರಾಣಿಯವರೇ. ಅವರು ಸಾಧಾರಣವಾದ ಅಂತಸ್ತಿನಲ್ಲಿ ಹುಟ್ಟಿದಾಗ್ಯೂ, ತನ್ನ ಸಾಮರ್ಥ್ಯದಿಂದಲೂ ರಾಯನ ಅನುಗ್ರಹದಿಂದಲೂ ಶ್ರೇಷ್ಟ ಅಧಿಕಾರವನ್ನು ರಾಜ್ಯದಲ್ಲಿ ಹೊಂದಿ ಇದ್ದರು.

ಪ್ರ. ರಾಯನ ಅನುಗ್ರಹವು ಅವರಿಗೆ ತಪ್ಪಿಹೋದದ್ದು ಹ್ಯಾಗೆ?

ಉ. ಹೆನ್ರಿ ಎಂಬವನು ಅನ್ನಾ ಬೊಲೇನ್ (Anna Boleyn) ಎಂಬ ಒಬ್ಬ ಲಂಜೆಯ ಮೇಲೆ ದುರಾಶೆ ಪಡುವದರಿಂದ ತನ್ನ ನ್ಯಾಯವಾದ ಸತಿಯನ್ನು ತ್ಯಜಿಸ ನೋಡುತ್ತಾನೆಂತ ತಿಳಿದು, ಅದಕ್ಕೆ ಒಪ್ಪಿಕೊಳ್ಳದೆ ಹೋದರು. ಕಡೆಯಲ್ಲಿ ರಾಯನು ಆ ಕೆಟ್ಟ ಸ್ತ್ರೀಯ ಅಪೇ

ಷೆಯ ಮೇರಿಗೆ ತಂನ ಮಂತ್ರಿಯಂನು ಬರತರ್ಫ ಮಾಡಿದನು.

ಪ್ರ. ವೊಲ್ಸಿ ಎಂಬ ಮಂತ್ರಿಯು ಎಲ್ಲಿ ತೀರಿಕೊಂದರು ?

ಉ. ಅವರು ರಾಯನ ಕಚೇರಿಗೆ ಕರೆಯಲ್ಪಡುವಾಗ, ವ್ಯಾಧಿಯಲ್ಲಿ ಬಿದ್ದದರಿಂದ, ಲೀಸ್ಟರ್ ಪಟ್ಟದ ಸನ್ಯಾಸಿಗಳ ಮಠದೊಳಗೆ ಆಶ್ರಯ ಹುಡುಕ ಬೇಕಾಗಿತ್ತು.

ಪ್ರ. ಸಾಯುವಾಗ ಅವರು ಹೇಳಿದ ಮುಖ್ಯವಾದ ವಚನವು ಯಾವದು ?

ಉ. “ನಾನು ನನ್ನ ರಾಯನಿಗೆ ಸೇವೆ ಮಾಡಿದಷ್ಟು ಜಾಗ್ರತೆಯಿಂದ ನನ್ನ ದೇವರಿಗೆ ಸೇವೆ ಮಾಡಿ ಇದ್ದೆನಾದರೆ, ಅವರು ನನ್ನ ವೃದ್ಧಾಪ್ಯದ ಕಾಲದಲ್ಲಿ ನಂನನ್ನು ಹೀಗೆ ಅನರ್ಥವಾಗಿ ಬಿಟ್ಟಿರುವದಿಲ್ಲ” ಎಂಬ ವಚನವಂನು ಉಚ್ಚರಿಸಿ ಸತ್ತರು.

ಪ್ರ. ಅವರ ಗುಣವು ಎಂಥದ್ದಾಗಿತ್ತು ?

ಉ. ಅವರು ಗಾಂಭೀರ್ಯದ ಮೇಲೆಯೂ ಅಧಿಕಾರದ ಮೇಲೆಯೂ ಅತಿಯಾಸೆಯುಳ್ಳವರಾಗಿದ್ದರು. ಆದರೆ ತಾವು ಸಂಪಾದಿಸಿದ ಅಧಿಕಾರ ದ್ರವ್ಯವೆಲ್ಲಾ ವಿದ್ಯ ಶಾಸ್ತ್ರಗಳ ಅಭಿವೃದ್ಧಿಗಾಗಿ ಬಳಿಸಿ ಕೊಳ್ಳುತ್ತಾಯಿದ್ದರು.

ಪ್ರ. ಹೆಂರಿ ರಾಯನು ಮತ ವಿಭಾಗಸ್ತನಾದ ಕರುವಾಯು, ತಂನ ನಿಯೋಗಿಗಳನ್ನು ತಂನ ಮಾರ್ಗಕ್ಕೆ ಸುಲಭವಾಗಿ ತಂದನೋ ?

ಉ. ಹೌದು. ಯಾತಕ್ಕಂದರೆ ಅವರೊಳಗೆ ಅಲ್ಪವಿಶ್ವಾಸವೂ ಅಲ್ಪಜಾತಿಯೂ ಉಳ್ಳಂಥಾ ಅನೇಕರಿದ್ದರು. ಆದಾಗ್ಯೂ, ಧೊರೆಗಳೊಳಗೂ ಸಾಧಾರಣವಾದ ಪ್ರಜೆಗಳೊಳಗೂ ಅನೇಕರು ಸತ್ಯವೇದದ ನಿಮಿತ್ತ ಹಿಂಸೆಪಟ್ಟರು.

ಪ್ರ. ರಾಯನು ಮಾಡಿದ ಮೊದಲನೇ ಹುಕೂಂ ಯಾವದು ?

ಉ. ಹೀನ ವಂಶದವನಾದ ಥೋಮಸ್ ಕ್ರೊಮ್ವೆಲ್ ( Thomas Cromwell ) ಎಂಬವನೊಬ್ಬನನ್ನು ಸೆಕ್ರೆತರಿ ಒವ್ ಸ್ತೇತ್ ( Secretary of State ) ಎಂಬ ದೊಡ್ಡ ಉದ್ಯೋಗಕ್ಕೆ ಎಬ್ಬಿಸಿ, ಸನ್ಯಾಸಿ ಮಠಗಳ ಸ್ಥಿತಿಯನ್ನು ವಿಚಾರಿಸುವದಕ್ಕೆ ಅವನನ್ನು ನೇಮಿಸಿದನು.

ಪ್ರ. ಯಾತಕ್ಕೆ ?

ಉ. ಆ ಕಾಲದ ಸನ್ಯಾಸಿಗಳು ಜನರ ಉದಾರತ್ವದಿಂದ ಹೇರಳವಾದ ಮಾನ್ಯ ಆಸ್ತಿ ಜಿಂದಿಗೆಗಳನ್ನು ಹೊಂದಿ ಇದ್ದದರಿಂದ, ತಾನು ಜೆರ್ಮನಿ ಪ್ರೊತೆಸ್ತಂತ್ (Protestant) ಧೊರೆಗಳ ಹಾಗೆ ಯಾವದೊಂದು ನೆವನದಿಂದ ಆ ದ್ರವ್ಯಗಳನ್ನು ಅಪಹರಿಸ ಬೇಕೆಂದಪೇಕ್ಷಿಸಿ, ಆ ಕೆಲಸಕ್ಕೆ ಮಹಾ ಪಿತ್ತಲಾಟವೂ ಚಾತುರ್ಯವೂ ಆದ ಥೋಮಸ್ ಕ್ರೊಮ್ವೆಲ್ ಎಂಬವನನ್ನು ಕಳುಹಿಸಿದನು.

ಪ್ರ. ಕ್ರೊಮ್ವೆಲ್ ಎಂಬವನೂ ಇವನ ಸಹಾಯಕರೂ ಏನು ಮಾಡಿದರು ?

ಉ. ಸನ್ಯಾಸಿಗಳ ಇಲ್ಲವೇ ಕನ್ಯಾಸ್ತ್ರೀಯರುಗಳ ಮಠ

ಗಳ ಶ್ರೇಷ್ಟಕಂನು ಕಲ್ಪಿಸಿ, ಇವರು ಹೆನ್ರಿ ರಾಯನಂನು ತಿರು ಸಭೆಯ ತಲೆಯುವನಾಗಿ ಅಂಗೀಕರಿಸ ಬೇಕೆಂದೂ ಅವನ ವಶಕ್ಕೆ ತಂಮ ಮಾನ್ಯ ಜಿಂದಿಗೆಯೆಲ್ಲಾ ಒಪ್ಪಿಸಿ ಬಿಡ ಬೇಕೆಂದೂ ಕಟ್ಟಳೆಮಾಡಿ, ಅಂಥಾ ಕರಾರಿಗೆ ರಾಜಿ ಪಡುವಂಥಾ ಶ್ರೇಷ್ಟರಿಗೆ ಪೆಂಶನ್ (pension) ಮಾಡುವೆ ವೆಂದು ಮಾತು ಕೊಟ್ಟರು.

ಪ್ರ. ಆ ಶ್ರೇಷ್ಟರು ಇಂಥಾ ಕರಾರಿಗೆ ರಾಜಿ ಪಡದೆ ಹೋದರೆ, ಅವರಿಗೆ ಏನಾಗುತ್ತಿತ್ತು ?

ಉ. ಮೊದಲು ಸೆರೆಮನೆಯಲ್ಲಿ ಇರಿಸಲ್ಪಡುವರು. ಮತ್ತು ಅದರಲ್ಲಿ ಹಸಿವೆಯಿಂದಲಾದರೂ ಛಳಿಯಿಂದಲಾದರೂ ಸಾಯದಿದ್ದರೆ, ಹೆನ್ರಿ ರಾಯನ ಜ್ಞಾನ ಶ್ರೇಷ್ಟತ್ವವಂನು ಅಂಗೀಕರಿಸದ ನಿಮಿತ್ತ ಅಂಥಾ ಸನ್ಯಾಸಿಗಳಂನು ಗಲ್ಲಿಗೆ ಹಾಕುವರು, ಇಲ್ಲವೇ, ದಹಿಸಿಬಿಡುವರು. ಕಥೂರ್ಸಿಯನ್ (Carthusian) ಸನ್ಯಾಸಿಗಳಲ್ಲಿ ೭೦ ಮಂದಿ ಒಂದೇ ಛಳಿಯ ಋತುವಿನಲ್ಲಿ ಕ್ಷುಧೆಯಿಂದಲೂ ಛಳಿಯಿಂದಲೂ ಸತ್ತರು.

ಪ್ರ. ಅಂಥಾ ಹಿಂಸೆಗೆ ಹೆನ್ರಿ ಎಂಬವನು ಯಾವ ನೆವವಂನು ಹೇಳುತ್ತಾ ಇದ್ದನು ?

ಉ. ಆ ಸನ್ಯಾಸಿಗಳೂ ಆ ಕನ್ಯಾಸ್ತ್ರೀಯರುಗಳೂ ದೇವ ಭಕ್ತಿ ಹೀನರೆಂದೂ ಮಹಾ ದೊಡ್ಡ ಪೋಕರಿಗಳೆಂದೂ ಅವರ ಮೇಲೆ ಚಾಡಿ ಹೇಳಿದನು. ಆದರೆ ಅವರ ನಡತೆಯಂನು ಶೋಧಿಸಿದಂಥವರೆಲ್ಲರೂ, ಪ್ರೋತೆಸ್ತಾಂ

ತರು ಮೊದಲಾಗಿ, ಆ ಬಾಡಿಯು ಆಸ್ಪದವಿಲ್ಲದಾಗಿತ್ತೆಂದು ರುಜು ಮಾಡಿ ಇದ್ಧಾರೆ.

ಪ್ರ. ಆ ಸನ್ಯಾಸಿಗಳ ಮಾನ್ಯ ಜಿಂದಿಗೆಗಳು ಯಾರಿಗೆ ಸೇರಿದವು?

ಉ. ಮೊದಲು ಇವುಗಳ ದೊಡ್ಡ ಪಾಲು ರಾಯನಿಗೆ ದೊರಕಿತು. ಆದರೆ ಅನೇಕ ಧೊರೆಗಳು ಸಹಾ ಇವುಗಳಲ್ಲಿ ಒಂದು ಪಾಲು ತಮಗಾಗಿ ಇರಿಸಿಕೊಂಡರು.

ಪ್ರ. ರಾಯನ ಚಿತ್ತದ ಮೇರೆಗೆ ರಾಜೀನಾಮೆ ಕೊಟ್ಟಂಥಾ ಸನ್ಯಾಸಿಗಳು ಪೆಂಷನ್ ಹೊಂದಿದರೋ?

ಉ. ಇಲ್ಲ, ನಿರಾಧಾರಿಯಾಗಿ ಬಿಡಲ್ಪಟ್ಟರು. ಇದಲ್ಲದೆ ಆ ಆ ಮಠಗಳ ಧರ್ಮದಿಂದ ಬದುಕುತ್ತಿದ್ದ ಭಿಕ್ಷೆಗಾರರಿಗೆ ವಿಶೇಷವಾಗಿ ಬಹು ಮೋಸವಾಯಿತು.

ಪ್ರ. ಹೆನ್ರಿ ಎಂಬ ರಾಯನು ತಂನ ಸತಿಗಳ ವಿಷಯವಾಗಿ ಹ್ಯಾಗೆ ನಡೆದನು?

ಉ. ಕಥೆರಿನೆಂಬ ರಾಣಿಯಂನು ಪರಿತ್ಯಾಗ ಮಾಡಿದ ಬಳಿಕ, ತಾನು ಇಟ್ಟುಕೊಂಡ ಅನ್ನಾ ಬೊಲೇನ್ ಎಂಬ ಲಂಜೆಯ ಮೇಲೆ ಸಂದೇಹಪಟ್ಟು, ವ್ಯಭಿಚಾರಿ ಎಂದು ಅವಳಂನು ಮರಣಕ್ಕೆ ನಿರ್ಣಯಿಸಿ ತಲೆ ಹೊಯಿಸಿದನು. ಇವಳು ಸತ್ತಬಳಿಕ, ಜೇನ್ ಸೀಮೊರ್ (Jane Seymour) ಎಂಬವಳನ್ನು ಮದಿವೆ ಮಾಡಿಕೊಂಡನು. ಆದರೆ ಆಕೆಯು ಒಂದು ಗಂಡು ಮಗುವಂನು ಹೆತ್ತು ಪ್ರಸೂತಿಯಲ್ಲಿ ಸತ್ತಳು. ಇವಳು ಸತ್ತ ಬಳಿಕ, ಅನ್ನ್ ಡೆ ಕ್ಲೆವ್ (Anne de Clèves)

ಎಂಬವಳನ್ನು ಮದುವೆ ಮಾಡಿದಾಗ್ಯೂ, ಆ ಕ್ಷಣವೇ ಅವಳ ಮೇಲೆ ಅರೋಚಿಕೆ ಪಟ್ಟು, ಪರಿತ್ಯಾಗ ಮಾಡಿದನು. ಆದ ತರುವಾಯ, ಕಥೆರಿನ್ ಹಾವರ್ಡ್ (Catherine Howard) ಎಂಬವಳನ್ನು ಮದುವೆ ಮಾಡಿ, ಕೊಂಚದರೊಳಗೆ ಆಕೆಯು ವ್ಯಭಿಚಾರ ಮಾಡಿದ್ದಾಳೆಂದು ನಿಶ್ಚಯಿಸಿ, ಇವಳಿಗೆ ಸಹಾ ತಲೆ ಹೊಯಿಸಿದನು. ಕಡೆಯಲ್ಲಿ, ಕಥೆರಿನ್ ಪಾರ್ (Catherine Parr) ಎಂಬವಳು ರಾಯನ ಸತಿಯಾದಳು. ಹೆನ್ರಿ ಎಂಬವನು ಅವಳಿಗೆ ಮುಂಚೆ ಸತ್ತದರಿಂದ ಅವಳು ಮಾತ್ರವೇ ಕಠಿಣ ಮರಣಕ್ಕೆ ತಪ್ಪಿಸಿದಳು.

ಪ್ರ. ಕಥೋಲಿಕರಿಗೆ ಮಾತ್ರವೇ ಹೆನ್ರಿ ರಾಯನು ಹಿಂಸೆ ಮಾಡಿದನೋ?

ಉ. ಇಲ್ಲ. ತನ್ನ ಜ್ಞಾನಶ್ರೇಷ್ಠತ್ವವನ್ನು ಅಂಗೀಕರಿಸದ ನಿಮಿತ್ತವಾಗಿ, ರಾಯನು ಕಥೋಲಿಕರನ್ನು ಬಾಧಿಸುವ ಸಮಯದಲ್ಲಿ, ಸತ್ ಪ್ರಸಾದ ಬೊಂಕುವ ನಿಮಿತ್ತವಾಗಿ ಪತಿತರನ್ನು ಸಹಾ ಬಾಧಿಸಿ ಬೆಂಕಿಯಲ್ಲಿ ಜೀವದೊಡನೆ ಸುಡಿಸುತ್ತಾ ಇದ್ದನು.

ಪ್ರ. ಕಥೋಲಿಕರೊಳಗೆ ಮರಣ ಅನುಭವಿಸಿದ ಮುಖ್ಯಸ್ತರು ಯಾರು?

ಉ. ವರಿಕ್ ಎಂಬ ಧೊರೆಯ ಸಹೋದರಿಯಾದ ಸಾಲಿಸ್ಬರಿ ಧೊರೆಸಾನಿಯೂ, ಥೋಮಸ್ ಮೂರ್ (Thomas Moore) ಎಂಬ ಪ್ರಭೂ, ಫಿಷರ್ (Fisher) ಮೇತ್ರಾಣಿ ಸ್ವಾಮಿಗಳೂ, ಸರ್ರಿ ಎಂಬ ಪಾಳ್ಯಗಾರನೂ,

ಇತ್ಯಾದಿ. ಸರ್ರಿ ಎಂಬವನ ತಂದೆಯಾದ ನೋರ್ಫೋಕ್ ಪ್ರಧಾನಿಯು ಸಹ ಮರಣಕ್ಕೆ ನಿರ್ಣಯಿಸಲ್ಪಟ್ಟಿದ್ದನು; ಆದರೆ ಅವನಿಗೆ ಮುಂಚೆ ಕ್ರೂರ ರಾಯನು ಸತ್ತನು.

ಪ್ರ. ಹೆನ್ರಿ ಎಂಬ ರಾಯನು ಸಾಯುವಾಗ ಅವನಿಗೆ ಎಷ್ಟು ಪ್ರಾಯವಿತ್ತು ?

ಉ. ೫೬ ಪ್ರಾಯದವನಾಗಿದ್ದನು. ೧೫೦೯ ಸಂವತ್ಸರದಿಂದ ೧೫೪೬ ನೇ ಸಂವತ್ಸರಕ್ಕೆ ಆಳಿದನು. ಇವನು ಪಂಚಪಾತಕನೆಂದು ಸರ್ವ ಗ್ರಂಥಕರ್ತರು ಏಕಮನಸ್ಸಾಗಿ ಹೇಳುವದರಿಂದ, ಇವನ ಗುಣವು ಎಂಥದ್ದೆಂದು ವಿವರಿಸಲಗತ್ಯವಿಲ್ಲ.

---

## ೬ ನೇ ಎಡ್ವರ್ಡ್ (Edward VI.) (1546. — 1553.)

---

ಪ್ರ. ೮ ನೇ ಹೆನ್ರಿ ಎಂಬವನಿಗೆ ಬದಲಾದವನ್ಯಾರು?

ಉ. ಜೇನ್ ಸೀಮೋರ್ ಎಂಬವಳ ಕುಮಾರನಾದ ೬ ನೇ ಎಡ್ವರ್ಡೆಂಬವನೇ. ಅವನು ಸಿಂಹಾಸನದ ಮೇಲೆ ಕುಂತ್ತುವಾಗ, ಅವನಿಗೆ ೯ ವರುಷ ಪ್ರಾಯ ಮಾತ್ರವಿತ್ತು.

ಪ್ರ. ಇವನ ಬಾಲ್ಯದ ಕಾಲದಲ್ಲಿ ರಾಜ್ಯದ ವಿಚಾರಣೆ ಮಾಡಿದವರ್ಯಾರು ?

ಉ. ಆ ಕೆಲಸಕ್ಕಾಗಿ ಹೆನ್ರಿ ರಾಯನು ೧೬ ಧೊರೆಗಳಂನು ನೇಮಿಸಿದ್ದನು. ಆದರೆ ಅಂಥಾ ನಿಬಂಧನೆ ನಡೆ ಮಾಡದೆ, ಸೊಮೆರ್ಸೇಟ್ (Somerset) ಪಾಳ್ಯಗಾರನು

ತಾನು ಚಿಕ್ಕ ರಾಯನ ಸೋದರ ಮಾವನಾಗಿದ್ದದರಿಂದ ಸ್ವತಂತ್ರವೆಲ್ಲಾ ವಹಿಸಿ ಕೊಂಡು, ಪ್ರೊತೆಕ್ಟರ್ ಎಂಬ ಖಿತಾ ಬು ಧರಿಸಿದವನಾದನು.

ಪ್ರ. ಇವನ ನಡತೆ ಎಂಥದ್ದಾಗಿತ್ತು ?

ಉ. ಇವನು ಪ್ರೊತೆಸ್ತಾಂತ್ ಬಿಷೋಪನಾದ ಕ್ರನ್ಮೆರ್ (Cranmer) ಎಂಬವನನ್ನು ತಂನ ಆಲೋಚನೆ ಕೂಟಕ್ಕೆ ಕರೆದು, ರಾಜ್ಯದಲ್ಲಿ ಪತಿತಸವನ್ನು ಪ್ರಬಲ ಮಾಡ ಲೆತ್ನಿಸಿದನು.

ಪ್ರ. ಯಾವ ಮುಖಾಂತ್ರಗಳಿಂದ ಅದನ್ನು ನೆರವೇರಿ ಸಿದನು ?

ಉ. ದಿವ್ಯ ಪೂಜೆಯಂನು ತೆಗದುಹಾಕಿ ಒಂದು ನೂತನವಾದ ಜಪದಪುಸ್ತಕ ಉಂಟುಮಾಡಿ, ತಿರುಸಭೆಯ ಪೂರ್ವೀಕರ ವಿಶ್ವಾಸವಂನೂ ಕಟ್ಟಳೆಗಳಂನೂ ದೇವದ್ರವ್ಯ ಅನುಮಾನಗಳಂನೂ ಮಾರ್ಪಡಿಸಿದ್ದಲ್ಲದೆ, ದೃಢರಾಗಿ ನಿಲ್ಲುವಂಥಾ ಗುರುಗಳೊಳಗೆ ಕೆಲವರಂನು ಸೀಮೆಯಿಂದ ಆಚೆ ತಳ್ಳಿ, ಬೇರೆ ಕೆಲವರಿಗೆ ಅಪರಾಧವಂನಿಕ್ಕಿ, ಬೇರೆ ಕೆಲವ ರನ್ನು ಕೊಂಧಾಕಿ, ಕಥೋಲಿಕರಂನು ಹಿಂಸಿಸಿದನು.

ಪ್ರ. ಪ್ರಜೆಗಳಿಗೆ ಈ ಬದಲು ಅಂಗೀಕಾರವಾಯಿತೋ?

ಉ. ಇಲ್ಲ. ದಿವ್ಯ ಪೂಜೆಯಂನು ರಾಯನು ನಿಷೇ ಧಿಸಿದ್ದಾನೆಂತ ತಿಳಿದು, ಅನೇಕ ಸ್ಥಳಗಳಲ್ಲಿ ಕಲಕುವೆಬ್ಬಿಸಿದರು. ಆದರೆ ಪ್ರೊತೆಕ್ಟರ್ ಧೊರೆಯು ಅವರಂನು ಬಲವಂತ ದಿಂದ ಸಮಾಧಾಯಿಸಿದನು.

ಪ್ರ. ಆ ಬಳಿಕ ಕ್ರನ್ಮೆರ್ ಎಂಬವನೂ ಇವನ ಗುಂಪಿ
ನವರೂ ಏನು ಮಾಡಿದರು ?

ಉ. ಅವರು ಮೇತ್ರಾಣಿ ಸ್ವಾಮಿಗಳೆಲ್ಲರಿಗೆ ಒಂದು
ಹುಕುಂ ಬರೆದು ಕಳುಹಿಸಿ, ದೇವಸ್ಥಾನಗಳಲ್ಲಿರುವ ಪೀಠ
ಗಳಂನು ತೆಗದು ಹಾಕಿ, ಇವುಗಳಿಗೆ ಬದಲಾಗಿ ಒಂದು
ಮೇಜೆಯಂನು ಸ್ಥಾಪಿಸುವ ಹಾಗೆ ವಿಧಿಸಿದರು.

ಪ್ರ. ಮೇತ್ರಾಣಿಗಳೆಲ್ಲರು ಆ ಕಟ್ಟಳೇ ಮೇರೆಗೆ ನಡೆ
ದರೋ ?

ಉ. ಇಲ್ಲ. ಗಾರ್ಡಿನೆರ್ (Gardiner) ಮತ್ತು ಬೊ
ನೆರ್ (Bonner) ಎಂಬ ಮೇತ್ರಾಣಿಗಳಿಬ್ಬರು ಆ ಕಟ್ಟಳೆ
ಮೀರಿ ನಡೆದದರಿಂದ ತಾವರ್ ಕೋಟೆಯಲ್ಲಿ ಮುಚ್ಚಲ್ಪ
ಟ್ಟರು. (೧೫೪೮)

ಪ್ರ. ಪ್ರೊತೆಕ್ತರೆಂಬ ಧೊರೆಯು ತಂನ ಅಧಿಕಾರವ
ಬಹು ಹೊತ್ತು ಕಾಪಾಡಿದನೋ ?

ಉ. ಇಲ್ಲ. ಅವನಿಗೆ ಬದಲಾಗಿ ಲೋರ್ಡ್ ವರಿಕ್
ಎಂಬವನು ದ್ಯೂಕ್ ಒವ್ ನೋರ್ಥೊಂಬೆರ್ಲಾಂಡ್
ಎಂಬ ನಾಮಾಂಕಿತವ ಧರಿಸಿಕೊಂಡು ಚಿಕ್ಕ ರಾಯನ
ಕಾರ್ಯಗಳಂನು ನಡಿಸಲಾರಂಭಿಸಿದನು; ಮತ್ತು ಸೋಮೆ
ರ್ಸೆತ್ ಎಂಬ ಧೊರೆಗೆ ತಲೆ ಹೊಯಿಸಿದನು.

ಪ್ರ. ಸೋಮೆರ್ಸೆತ್ ಸಾಯುವಾಗ ಜನರಿಗೆ ಬಹು
ದುಃಖವಾಯಿತೋ ?

ಉ. ಇಲ್ಲ. ತಂನ ಪತಿತನದಿಂದಲೂ ಲೋಭದಿಂದ

ಲೂ ಕ್ರೂರತನದಿಂದಲೂ ಎಲ್ಲರಿಗೆ ಅಸಹ್ಯಕರನಾಗಿದ್ದನು. ತನಗೆ ಒಂದು ಅರಮನೆಯನ್ನು ಕಟ್ಟಿಸಿಕೊಳ್ಳುವದಕ್ಕೆ ಅನೇಕ ದೇವಸ್ಥಾನಗಳನ್ನು ಕೆಡವಿಸಿ ಇದ್ದದ್ದಲ್ಲದೆ, ಅನೇಕ ಜನರನ್ನು ಅನ್ಯಾಯವಾಗಿ ಹಿಂಸಿಸಿ, ಕೊಲ್ಲಿಸಿ ಇದ್ದನು.

ಪ್ರ. ನೋರ್ಥಂಬೆರ್ಲಾಂಡ್ ಎಂಬ ಧೊರೆಯು ಒಳ್ಳೆಯವನಾಗಿದ್ದನೋ?

ಉ. ಇಲ್ಲ; ಹೆಚ್ಚು ಕಡಿಮೆ ಸೋಮರ್ಸೆಟ್ ಎಂಬವನ ಹಾಗಿದ್ದನು. ಇದಲ್ಲದೆ, ಎಡ್ವರ್ಡೆಂಬ ರಾಯನಿಗೆ ಮಕ್ಕಳು ಇಲ್ಲವೆಂತಲೂ ಆರೋಗ್ಯವು ತಪ್ಪಿಹೋಯಿತೆಂತಲೂ ನೋಡಿ, ತನ್ನ ವಂಶದವರನ್ನು ರಾಜ್ಯಭಾರಕ್ಕೆ ಹತ್ತಿಸಲಪೇಕ್ಷೆಯಾಗಿ, ಚಿಕ್ಕ ರಾಯನು ಒಂದು ಮರಣದ ಪತ್ರಿಕೆ ಬರೆದು ತನ್ನ ಸಹೋದರಿಗಳಾದ ಮೇರಿ (Mary) ಮತ್ತು ಎಲಿಸಬೆಥ್ ಎಂಬವರನ್ನು ಸಿಂಹಾಸನದಿಂದ ನಿಷೇಧಿಸುವ ಹಾಗೆಯೂ, ತನ್ನ ದಾಯಾದಿಯಾದ ಜೇನ್‌ಗ್ರೇ (Jane Grey) ಎಂಬವಳನ್ನು ರಾಣಿಯಾಗಿ ನೇಮಿಸುವ ಹಾಗೆಯೂ ಉಪಾಯ ಮಾಡಿದನು.

ಪ್ರ. ಯಾವ ಅಭಿಪ್ರಾಯದಿಂದ ಇದನ್ನು ಮಾಡುತ್ತಿದ್ದನು?

ಉ. ನೋರ್ಥಂಬೆರ್ಲಾಂಡ್ ಎಂಬ ಧೊರೆಯ ಮಗನಾದ ಗಿಲ್ಫೋರ್ಡ್ ದಡ್ಲಿ (Guilford Dudley) ಎಂಬವನು ಜೇನ್‌ಗ್ರೇ ಎಂಬವಳನ್ನು ಮದುವೆ ಮಾಡಿಕೊಂಡದ

ರಿಂದಲೂ ಅಂಥಾ ಧೊರೆಸಾನಿಯು ಪತಿತರ ಮೇಲೆ ಬಹು ಭ್ರಮೆಯಾಗಿದ್ದದರಿಂದಲೂ ಆ ನಿಬಂಧನೆ ಮಾಡಿಸಿ ಇದ್ದನು.

ಪ್ರ. ಎಡ್ವಾರ್ಡೆಂಬ ರಾಯನು ರಾಜ್ಯಭಾರದ ಬಾಧ್ಯತೆಯಂನು ಹಾಗೆ ನೇಮಿಸಿದನೋ ?

ಉ. ಕೂಡದು; ಯಾತಕ್ಕೆಂದರೆ ಚಿಕ್ಕ ಪ್ರಾಯದಿಂದಲೂ ವ್ಯಾಧಿಯ ಉಪದ್ರದಿಂದಲೂ ನೋರ್ಥೊಂಬೆರ್ಲಾಂಡ್ ಎಂಬ ಧೊರೆಯ ಚಿತ್ತವ ಎದುರಿಸ ಕೂಡದವನಾಗಿದ್ದನು. ಅವನು ಜೇನ್ ಗ್ರೇ ಎಂಬವಳಂನು ರಾಣಿಯಾಗಿ ನೇಮಿಸಿ ಮರಣವಾದನು.

ಪ್ರ. ಎಡ್ವಾರ್ಡೆಂಬವನ ಗುಣವು ಎಂಥಾದ್ದಾಗಿತ್ತು ?

ಉ. ಅವನು ಹದಿನಾರು ಪ್ರಾಯದವನಾಗಿ ಸತ್ತದರಿಂದಲೂ ಯಾವಾಗಲೂ ತಂನ ಹಿರಿಯರ ವಶದಲ್ಲಿ ಇದ್ದದರಿಂದಲೂ ಅವನಿಗೆ ಯಾವ ಗುಣವು ಸಹಜವಾಗಿತ್ತೆಂದು ಹೇಳ ಪ್ರಯಾಸವಾದದ್ದಾಗಿದೆ.

## ಮೇರಿ ( Mary. ) ( 1553 — 1558. )

ಪ್ರ. ೬ನೇ ಎಡ್ವಾರ್ಡೆಂಬವನಿಗೆ ಬದಲಾದವನ್ಯಾರು ?

ಉ. ಅವನ ಅಕ್ಕನಾದ ಮೇರಿ ಎಂಬವಳೇ. ನೋರ್ಥೊಂಬೆರ್ಲಾಂಡ್ ಎಂಬ ಧೊರೆಯು ಜೇನ್ ಗ್ರೇ ಎಂಬವಳಂನು ರಾಣಿಯಾಗಿ ಸ್ಥಾಪಿಸ ಪ್ರಯತ್ನಿಸಿದನು. ಆದರೆ

ಮೇರಿ ಎಂಬವಳು ಫ್ರಮ್ಲಿಂಘಂ (Framlingham) ಎಂಬ ಕೋಟೆಯಲ್ಲಿ ತನಗೆ ಸಹಾಯಕರಾಗಿರುವ ಧೊರೆ ಪ್ರಭೂ ಪ್ರಜೆಗಳೆಲ್ಲರನ್ನು ಕೂಡಿಸಿದಳು; ಮತ್ತು ಕೊಂಚದರೊಳಗೆ ೩೦,೦೦೦ ಜನರ ದಂಡು ಆಕೆಯ ಬಳಿಗೆ ಶೇರಿಕೊಂಡಿತು.

ಪ್ರ. ಆಗ ಲೊಂಡನ್ ಪಟ್ಟದಲ್ಲಿ ಏನು ಸಂಭವಿಸಿತು?

ಉ. ರಾಜಾಲೋಚನೆಯ ಧೊರೆಗಳು ಮೇರಿ ಎಂಬವಳನ್ನು ರಾಣಿಯಾಗಿ ಪ್ರಕಟಿಸಿ, ಪಟ್ಟದ ಬಾಗಲುಗಳನ್ನು ಆಕೆಗೆ ತೆರೆದರು. ಮತ್ತು ಜೇನ್ ಗ್ರೇ ಎಂಬವಳು ಸೈಯನ್ ಹೌಸ್ (Sion House) ಎಂಬ ಅರಮನೆಗೆ ಓಡಿ ಹೋಗ ಬೇಕಾಯಿತು.

ಪ್ರ. ತನಗೆ ವಿರೋಧ ಮಾಡಿದಂಥವರಿಗೆ ಮೇರಿ ಎಂಬ ರಾಣಿಯು ಏನು ಶಿಕ್ಷೆ ಮಾಡಿದಳು?

ಉ. ನೋರ್ಥಂಬೆರ್ಲಂಡ್ ಎಂಬ ದ್ರೋಹಿಗೆ ಮಾತ್ರ ತಲೆ ಹೋಯಿಸಿದಳು. ಮತ್ತು ಧೊರೆಗಳು ಜೇನ್ ಗ್ರೇ ಎಂಬವಳಂನೂ ಇವಳ ಪುರುಷನಾದ ಗಿಲ್ಫೊರ್ಡ್ ದದ್ಲಿ ಎಂಬವನನ್ನೂ ಸಹ ಹತಮಾಡ ಬೇಕೆಂದು ನಿರ್ಣಯಿಸಿದಾಗ್ಯೂ, ರಾಣಿಯು ಜೇನ್ ಎಂಬವಳ ಚಿಕ್ಕ ಪ್ರಾಯವನ್ನೂ ಅವಿವೇಕವನ್ನೂ ನೋಡಿ ಅವರಿಬ್ಬರಿಗೆ ಮಾಫು ಮಾಡಿದಳು.

ಪ್ರ. ಪ್ರೋತೆಸ್ತಾಂತ್ ಪತಿತರು ಆ ಸಮಯದಲ್ಲಿ ಏನು ಮಾಡಿದರು?

ಉ. ಅವರು ಕೋಪೋದ್ರೇಕದಿಂದ ರಾಣಿಯನ್ನು

ದೂಷಿಸಲಾರಂಭಿಸಿ, ಅವರ ಬಿಷೋಪುಗಳೊಳಗೆ ಕ್ರನ್ಮೆರ್ ಮತ್ತು ಲಾತಿಮೆರ್ (Latimer) ಎಂಬವರಿಬ್ಬರು ಆಕೆಯನ್ನು ಕುರಿತು ಬರು ಅವಮಾನವುಳ್ಳ ಚಾಡಿಗಳಂನು ಜನರುಗಳೊಳಗೆ ಪ್ರಸಿದ್ಧ ಮಾಡಿದರು. ಆದ್ದರಿಂದ ಅವರೂ ಇನ್ನು ಕೆಲ ಪ್ರೋತೆಸ್ತಾಂತ್ ಕಲರುಕಾರರೂ ಮರಣಕ್ಕೆ ನಿರ್ಣಯಿಸಲ್ಪಟ್ಟರು.

ಪ್ರ. ಮೇರಿ ಎಂಬವಳ ರಾಜ್ಯಭಾರದ ಕಾಲದಲ್ಲಿ ಯಾವದೊಂದು ಕಲರುವಾಯಿತೋ?

ಉ. ಹೌದು. ರಾಣಿಯು ಮನ್ನಿಸಿದಂಥಾ ಜೇನ್ ಗ್ರೇ ಎಂಬವಳಿಗೆ ಸಹಾಯವಾಗಿ ಇವಳ ತಂದೆಯಾದ ಸಫ್ಫೋಲ್ಕ್ ಪಾಳ್ಯಗಾರನೂ, ಮತ್ತು ಎಲಿಸಬೆಥ್ ಎಂಬ ರಾಜಪುತ್ರಿಗೆ ಸಹಾಯವಾಗಿ ಸರ್ ಥೋಮಸ್ ವಾಯತ್ (Sir Thomas Wyatt) ಎಂಬ ಧೊರೆಯೂ, ರಾಣಿಯ ಅಧಿಕಾರವ ತೆಗೆದುಹಾಕ ಪ್ರಯಾಣ ಪಟ್ಟರು.

ಪ್ರ. ಅದರಿಂದ ಏನಾಯಿತು?

ಉ. ರಾಣಿಯ ಸೇವಕರು ಅವರಂನು ಹಿಡಿದು, ಜೇನ್ ಗ್ರೇ ಎಂಬವಳಂನೂ ಇವಳ ಪುರುಷನಂನೂ ಥೋಮಸ್ ವಾಯತ್ ಎಂಬವನಂನೂ ಸಫ್ಫೋಲ್ಕ್ ಎಂಬ ಪಾಳ್ಯಗಾರನಂನೂ ಹತ ಮಾಡಿದರು.

ಪ್ರ. ಮೇರಿ ಎಂಬ ರಾಣಿಯ ರಾಜ್ಯಭಾರದ ವಿಶೇಷವಾದ ಸಂಗತಿಗಳು ಯಾವವು?

ಉ. ಪತಿತರಂನು ದಂಡಿಸಿದ್ದೂ, ಕಥೋಲಿಕು ಸತ್ಯ

ವೇದವ ತಿರಿಗಿ ಸ್ಥಾಪಿಸಿದ್ದೂ, ಕಾಲೇಸ್ ಪಟ್ಟಣವು ಫ್ರೆಂಚ್ ಜನರಿಂದ ಹಿಡಿಯಲ್ಪಟ್ಟದ್ದೂ, ಇವುಗಳೇ.

ಪ್ರ. ಮೇರಿ ಎಂಬವಳು ಪತಿತರನ್ನು ಹ್ಯಾಗೆ ದಂಡಿಸಿದಳು ?

ಉ. ಜ್ಞಾನ ಅಧಿಕಾರವಿಲ್ಲದೆ, ತಿರು ಸಭೆಯ ಕಟ್ಟಳೆಗಳಿಗೆ ವಿರೋಧವಾಗಿ, ತಮ್ಮನ್ನು ತಾವೇ ಸ್ಥಾಪಿಸಿಕೊಂಡಂಥಾ ಪ್ರೋತೆಸ್ತಾಂತ್ ಬಿಷೊಪುಗಳನ್ನು ತೆಗದು ಹಾಕಿದಳು. ಅವರೊಳಗೆ ಹೊಲ್ಗೇತ್ (Holgate), ಜೋನ್ ಬರ್ದ್ (John Bird), ಪೋಲ್ ಬುಷ್ (Paul Bush), ವಿಲ್ಯಂ ಬರ್ಲೋ (William Barlow) ಎಂಬವರೇ. ಪತಿತರಾದ ಪಾದ್ರಿಗಳೊಳಗೂ ಪ್ರಜೆಗಳೊಳಗೂ ಸುಮಾರು ೩೦೦ ಮಂದಿ ದೇಶಾಂತ್ರವಾಗಿ ಜೆರ್ಮನಿ, ಸ್ವಿದೆರ್ಲಾಂಡ್ (Switzerland) ಸೀಮೆಗಳಿಗೆ ಓಡಿಹೋದರು. ಮೂರ್ಖತನವಾಗಿ ನಿಂತ ಪತಿತರೊಳಗೆ ಕ್ರನ್ಮೆರ್, ಲಾತಿಮೆರ್, ಫರ್ರರ್ (Farrar), ಹುಪೆರ್ (Hooper), ರಿಡ್ಲಿ (Ridley) ಬಿಷೊಪರು ರಾಜಾಲೋಚನೆಗಾರರ ತೀರ್ಪಿಗೆ ಅನುಸಾರವಾಗಿಯೂ ರಾಣಿಯ ಇಷ್ಟಕ್ಕೆ ಪ್ರತಿಕೂಲವಾಗಿಯೂ ಕೊಂಧಾಕಲ್ಪಟ್ಟರು.

ಪ್ರ. ಕಾಲೇಸ್ ಎಂಬ ಪಟ್ಟಣವು ಫ್ರೆಂಚ್ ಜನರಿಂದ ಹಿಡಿಯಲ್ಪಟ್ಟಾಗ, ರಾಣಿಗೆ ಬಹು ವ್ಯಾಕುಲವಾಯಿತೋ ?

ಉ. ಹೌದು. ಅಂಥಾ ಅಪಜಯವನ್ನು ಮರೆಯಲಾರದೆ ಇದ್ದಳು. ಈ ದುಖ್ಖದಿಂದಲೂ ಪ್ರೋತೆಸ್ತಾಂತರು

ಅವಳಿಗೆ ಮಾಡಿದಂಥಾ ತೊಂದರೆಯಿಂದಲೂ ಅವಳ ಆರೋಗ್ಯವು ಕುಂಗಿ, ಜ್ವರದಲ್ಲಿ ಬಿದ್ದು ಸತ್ತಳು. ೬ ವರುಷ ಮಾತ್ರವೇ ರಾಜ್ಯಭಾರ ಮಾಡಿ ಇದ್ದಳು. (೧೫೫೮.)

ಪ್ರ. ಮೇರಿ ಎಂಬ ರಾಣಿಯು ಪತಿತರನ್ನು ಖಂಡಿತವಾಗಿ ಶಿಕ್ಷಿಸಿದ್ದು ತಪ್ಪೋ ?

ಉ. ಇಲ್ಲ. ಇವರು ಹೆನ್ರಿ ಮತ್ತು ಎಡ್ವರ್ಡ್ ಎಂಬವರ ಕಾಲದಲ್ಲಿ ಅನ್ಯಾಯವಾಗಿ ಕಥೋಲಿಕರನ್ನು ಬಾಧಿಸಿ, ರಾಜ್ಯದಲ್ಲಿ ಕಳವಳ ಎಬ್ಬಿಸಿ ಇದ್ದರು. ಮೇರಿಯಳ ಕಾಲದಲ್ಲಿ ಸಹಾ ಅನೇಕರು ಅವಲಕ್ಷಣವಾದ ಪುಸ್ತಕಗಳಲ್ಲಿ ಆಕೆಯನ್ನು ಬೇ ಆಬುರು ಮಾಡಿದ್ದಲ್ಲದೆ, ಆಕೆಗೆ ವಿರೋಧವಾಗಿ ಜೇನ್ ಗ್ರೇ ಇಲ್ಲವೇ ಎಲಿಸಬೆಥ್ ಎಂಬವರನ್ನು ಸಿಂಹಾಸನದ ಮೇಲೆ ಸ್ಥಾಪಿಸ ಎತ್ನಿಸುತ್ತಾ ಇದ್ದರು. ಗುರುಗಳನ್ನೂ ರಾಣಿಯ ಚಾಕರಿಯಲ್ಲಿರುವವರನ್ನೂ ಮೊದಲಾಗಿ ಅನೇಕ ಸಮಯಗಳಲ್ಲಿ ಕಲ್ಲೆಸದು ಕೊಲ್ಲುವದಕ್ಕೆ ಪ್ರಯಾಸ ಪಟ್ಟರು. ಇದಲ್ಲದೆ ಪತಿತನವನ್ನು ಮಹಾ ಖನ್ತನವಾಗಿ ಬೋಧಿಸುವಂಥಾ ಪಾತಕವು ಆ ಕಾಲದಲ್ಲಿ ಮರಣದ ಶಿಕ್ಷೆಗೆ ತಕ್ಕದ್ದೆಂದು ಎಣಿಸಲ್ಪಡುತ್ತಿತ್ತು.

## ಎಲಿಸಬೆಥ್ (Elizabeth) (1558 — 1602.)

ಪ್ರ. ಎಲಿಸಬೆಥ್ ಎಂಬವಳ ರಾಜ್ಯಭಾರದಲ್ಲಿ ವಿಶೇಷವಾಗಿ ಗುರಿನ ತಕ್ಕದ್ದೇನು ?

ಉ. ಅವಳು ಕಥೋಲಿಕರು ಸತ್ಯವೇದವಂನು ಬಾಧಿಸಿದ್ದೂ, ಮೇರಿ ಸ್ಟ್ಯುವರ್ಟ್ (Mary Stuart) ಎಂಬ ರಾಣಿಯಂನು ಅಧಿಕಾರವಿಲ್ಲದೆ ಕುತ ಮಾಡಿಸಿದ್ದೂ, ಅನ್ಯ ದೇಶಗಳಲ್ಲಿ ಕೆಲವು ಜಗಳಗಳಂನು ನಡಿಸಿದ್ದೂ, ಇವೇ ಗುರಿಸ ತಕ್ಕ ಪ್ರಧಾನ ವೃತ್ತಾಂತಗಳೇ.

ಪ್ರ. ಇವಳು ಅಡ್ಡಿ ಇಲ್ಲದೆ ರಾಣಿಯಾಗಿ ಅಂಗೀಕರಿಸಲಟ್ಟಳೋ ?

ಉ. ಹೌದು. ಇವಳು ಅನ್ನಾ ಬೊಲೇನ್ ಎಂಬ ಹೆಂಡತಿಯ ಮಗಳಾಗಿದ್ದರೂ, ಮತ್ತು ಜನರಲ್ಲಿ ದೊಡ್ಡ ಪಾಲು ಇಂನು ಕಥೋಲಿಕ್ ವೇದಸ್ತರಾಗಿದ್ದರೂ, ಪ್ರಭುಗಳಾಗಲಿ ಪ್ರಜೆಗಳಾಗಲಿ ಅಡ್ಡಿ ಮಾಡದೆ ಅವಳಂನು ಅಂಗೀಕರಿಸಿದರು.

ಪ್ರ. ಅವಳು ಮೊದಲು ಮಾಡಿದ ನಿಬಂಧನೆ ಯಾವದು ?

ಉ. ಸೆಸಿಲ್ (Cecil) ಎಂಬ ಬರು ಚಾತುರ್ಯವುಳ್ಳ ತಂನ ಮಂತ್ರಿಯ ಆಲೋಚನೆಗೆ ಅನುಸಾರವಾಗಿ, ಅವಳು ೬ನೇ ಎದ್ವಾರ್ಡೆಂಬ ರಾಯನು ಮಾಡಿದ ಹಾಗೆ ತಿರಿಗಿ ಪ್ರೊತೆಸ್ತಾಂತ್ ವೇದವಂನು ಇಂಗ್ಲಾಂಡ್ ಸೀಮೆಯಲ್ಲಿ ಸ್ಥಾಪಿಸ ಪ್ರಯತ್ನಿಸಿದಳು.

ಪ್ರ. ಪ್ರೊತೆಸ್ತಾಂತ್ ಪಕ್ಷದ ಮೇಲೆ ನಿಜವಾದ ವಿಶ್ವಾಸವು ಅವಳಿಗಿತ್ತೋ ?

ಉ. ಇಲ್ಲ. ಇವಳ ಒಳಗಿನ ವಿಶ್ವಾಸವು ಬೇರೆಯಾಗಿ

ಇತ್ತೆಂದೂ ಇವಳ ರಾಜ್ಯನೀತಿ ಬೇರೆಯಾಗಿತ್ತೆಂದೂ ಅನೇಕ ಗುರುತುಗಳಿಂದ ತಿಳಿಯ ಬರುತ್ತೆ.

ಪ್ರ. ಆ ಗುರುತುಗಳು ಯಾವವು ?

ಉ. ಮದಿವೆ ಮಾಡಿ ಕೊಂಡ ದೇವ ಭ್ರಷ್ಟರಾದ ಗುರುಗಳ ಮೇಲೆ ಯಾವಾಗ ಬರೂ ಅರೋಚಿಕೆಯನ್ನು ತೋರಿಸಿದ್ದಲ್ಲದೆ, ತಾನು ಸ್ಥಾಪಿಸಿದ ಹೊಸ ವೇದದಲ್ಲಿ, ಪೂರ್ವಕಾಲದಲ್ಲಿದ್ದಂತೆ, ಪ್ರತಿಮೆಗಳ ವಂದನೆಯನ್ನೂ ಅರ್ಚ್ಯಶಿಷ್ಟರ ವಂದನೆಯನ್ನೂ ಸತ್ತವರಿಗಾಗಿ ಆಗತಕ್ಕ ಪ್ರಾರ್ಥನೆಗಳನ್ನೂ ಕಾಪಾಡಿದಳು.

ಪ್ರ. ಪಾರ್ಲಮೆಂಟ್ ಎಂಬ ತಂನ ಆಲೋಚನೆಯ ಸಭೆಯಂನು ಹ್ಯಾಗೆ ಏರ್ಪಡಿಸಿದಳು ?

ಉ. ಹೌಸ್ ಒವ್ ಕೊಮರ್ನ್ಸ್ ( House of Commons ) ಎಂಬ ಆಲೋಚನೆಯ ಸಭೆಯಲ್ಲಿ ಇರ ತಕ್ಕವರಂನು ಅವಳು ತಂನ ಇಷ್ಟಪ್ರಕಾರವಾಗಿ ನೇಮಿಸಿಕೊಂಡಳು. ಮತ್ತು ಈ ಉಪಾಯದಿಂದ ತನಗೆ ಕುಮರು ಮಾಡಲಾಶಿಸುವ ಜನರಂನು ಕರ್ರೈಸಿ ಇದ್ದಾಗ್ಯೂ, ಸನ್ಯಾಸಿ ಮಠಗಳನ್ನು ತೆಗದು ಹಾಕ ಬೇಕೆಂದೂ ರಾಣಿಗೆ ಶ್ರೇಷ್ಠಜ್ಞಾನಾಧಿಕಾರ ನೇಮಿಸ ಬೇಕೆಂದೂ ಅವರಂನು ಕೇಳುವಾಗ, ಬಹಳ ಅಭ್ಯಂತರ ಮಾಡಿದರು.

ಪ್ರ. ಅಂಥಾ ಜ್ಞಾನ ಅಧಿಕಾರದ ಅಭಿಪ್ರಾಯವು ಎಂಥಾದ್ದು ?

ಉ. ಆಲೋಚನೆ ಸಂಘದವರು ತೀರ್ಪು ಮಾಡಿದ್ದೇ

నెందరె: ఇన్ను ముందె రాయను, యార సంమతి ఆలోచనెయిల్లదె, సర్వబగె జ్ఞానాధికారవన్ను వహిం సికొళ్ళువ హాగూ, వేద సంబంధవాద దుర్బో ధనెగళెల్లా నిగ్రహిసువ హాగూ, తిరు సభెయ రంళి నేమగళన్ను తళ్ళువదక్కాదరూ బేరె రిహాసవుగళన్ను స్థాపిసువదక్కాదరూ స్వతంత్ర రిహాందువహాగూ, తిరు సాంగ్యగళెల్లా రద్దు మాడువదక్కాదరూ కల్పిసువదక్కా దరూ అధికార పడెయువహాగూ, తీర్పు మాడిదరు.

ప్ర. రాణియు జ్ఞానాధికారవంను అంగీకరిసద వర మేలె ఏను శిక్షెయిరుత్తిత్తు ?

ఉ. మొదలనే దఫా, అంథవరు తంమ ఒడవె ఆస్తియెల్లా రిహాగలాడిసువరు; ఎరడనే స్వారి, గడి దాటిసల్పడువరు, ఇల్లవే బంధిఖానెయల్లి హాకల్పడు వరు; మూరనే స్వారి, మరణక్కె నేమిసల్పడువరు.

ప్ర. ఆ కాలదల్లి ఆదంథా బేరె ప్రధాన రంబుం నామెగళు యావవు ?

ఉ. మేత్రాణియవర నేమకవాదద్దు రాణిగె ఒప్పిసల్పట్టితు. మత్తు యావదొందు మేత్రాణిస్థానవు ఖాలియాదాగ, రాణియు ఇదర జందిగె మాన్యగ ళెల్లా స్వీకరిసువదక్కూ అదక్కె బదలాగి యావదొం దు సంబళ మేత్రాణియవరిగె మొకరురు మాడువ దక్కూ స్వతంత్ర ఉళ్ళవళాదళు.

ಪ್ರ. ಎಲಿಸಬೆಥ್ ಎಂಬವಳು ಸ್ಕೊಟ್ಲಾಂಡ್ ದೇಶದ ರಾಣಿಯಾದ ಮೇರಿ ಸ್ಟ್ಯುವರ್ಟ್ ಎಂಬವಳ ಕುರಿತು ಮತ್ಸರ ಪಟ್ಟದ್ದು ಯಾಕೆ?

ಉ. ಆಕೆಗೆ ಇಂಗ್ಲಾಂಡ್ ಸಿಂಹಾಸನದ ಮೇಲೆ ನ್ಯಾಯವಾದ ಬಾಧ್ಯತೆಯು ಇದ್ದದರಿಂದಲೂ, ಫ್ರಾನ್ಸ್ ಸೀಮೆಯ ರಾಜಪುತ್ರನಾದ ಫ್ರಾನ್ಸಿಸ್ (Francis) ಎಂಬವನಿಗೆ ಆಕೆಯು ಮದಿವೆಯಲ್ಲಿ ಕೊಡಲ್ಪಟ್ಟದರಿಂದಲೂ, ಆಕೆಯ ಮೇಲೆ ಎಲಿಸಬೆಥ್ ಎಂಬವಳು ಮತ್ಸರ ಪಡುತ್ತಿದ್ದಳು.

ಪ್ರ. ಎಲಿಸಬೆಥ್ ಎಂಬವಳು ಮೇರಿ ಸ್ಟ್ಯುವರ್ಟ್ ಎಂಬವಳ ವಿಷಯದಲ್ಲಿ ಹ್ಯಾಗೆ ನಡೆದಳು?

ಉ. ತಂನ ವಾಡಿಕೆಯಾದ ವಂಚನೆಯಿಂದಲೂ ಅನ್ಯಾಯದಿಂದಲೂ ನಡೆದಳು. ಅದು ಹ್ಯಾಗಂದರೆ, ಮೇರಿ ಎಂಬ ರಾಣಿಯು ಫ್ರಾನ್ಸ್ ಸೀಮೆಯಲ್ಲಿರುವಾಗ, ಆಕೆಗೆ ವಿರೋಧವಾಗಿ ಸ್ಕೊಚ್ ಕಲಹಕಾರರಿಗೆ ಧೈರ್ಯ ಕೊಡುತ್ತಾ ಅವರಿಗೆ ಸಹಾಯವಾಗಿ ದಂಡೂ ರೂಪಗಗಳನ್ನೂ ಸಹಾ ಕಳುಹಿಸುತ್ತಾ ಇದ್ದಳು. ಆ ಕಲಹಿಂಗಳು ಭ್ರಮೆಯುಳ್ಳ ಪತಿತರಾಗಿದ್ದ ಕಾರಣ, ಮೇರಿ ಎಂಬ ತಂನ ರಾಣಿಯಂನು ದೂಷಿಸಿ, ಕಥೋಲಿಕ್ ಸಭೆಯಂನು ಸೈತಾನನ ಕೂಟವೆಂತಲೂ ತಂನ ಸಭೆಯಂನು ಕರ್ತರ ಸಭೆ ಎಂತಲೂ ಕರೆಯುತ್ತಾ ಇದ್ದರು.

ಪ್ರ. ಫ್ರಾನ್ಸಿಸ್ ಎಂಬ ರಾಜಪುತ್ರನು ಸತ್ತ ಬಳಿಕ ಮೇರಿ ಎಂಬವಳು ಸ್ಕೊಟ್ಲಾಂಡ್ ಸೀಮೆಗೆ ತಿರಿಗಿ ಬರುವ

ವೇಳೆಯಲ್ಲಿ, ಎಲಿಸಬೆಥ್ ಎಂಬವಳು ಏನು ಮಾಡಿದಳು ?

ಉ. ಮೇರಿ ಎಂಬವಳು ತಿರಿಗಿ ಮದಿವೆ ಮಾಡಿಕೊಳ್ಳದ ಹಾಗೆ ನಾನಾವಿಧ ಉಪಾಯಗಳಂನು ಮಾಡಿದಳು. ಆದರೆ ಮೇರಿ ಎಂಬವಳು ಎಲಿಸಬೆಥ್ ರಾಣಿಯ ರಹಸ್ಯವಾದ ತಾತ್ಪರ್ಯವಂನು ತಿಳಿದು ಹೆನ್ರಿ ಡಾರ್ನ್ಲಿ (Henry Darnley) ಎಂಬವನಂನು ಮದಿವೆ ಮಾಡಿಕೊಂಡಳು. ಆತನು ಹೆಣ್ಣಿನ ವರ್ಗದಲ್ಲಿ ೭ ನೇ ಹೆನ್ರಿ ಎಂಬ ರಾಯನಿಗೆ ದೂರ ನೆಂಟಸ್ಥನಾಗಿದ್ದನು.

ಪ್ರ. ಈ ಮದಿವೆಯಿಂದ ಮೇರಿ ಎಂಬ ರಾಣಿಗೆ ಶುಭವಾಯಿತೋ ?

ಉ. ಇಲ್ಲ. ಮೊದಲು ಮೇರಿ ಎಂಬ ರಾಣಿಯು ಒಂದು ಗಂಡು ಮಗುವಂನು ಪಡೆದಳು. (ಅವನಿಗೆ ಜೇಂಸ್ ಎಂಬ ಹೆಸರು ಉಂಟಾಯಿತು. ದೊಡ್ಡವನಾದ ಬಳಿಕ ಇಂಗ್ಲಾಂಡ್ ಸೀಮೆಯ ಸಿಂಹಾಸನದ ಮೇಲೆ ಏರಿದನು.) ಆದರೆ ಕೊಂಚ ಕಾಲದ ತರುವಾಯ ಪ್ರೋತೆಸ್ತಾಂತರಾದ ಕೆಲ ಧೊರೆಗಳು ಡಾರ್ನ್ಲಿ ಎಂಬವನಿಗೆ ವಿರೋಧವಾದ ಸಂಚು ಮಾಡಿಕೊಂಡು, ಆವನಂನು ತಂನ ಅರಮನೆಯಲ್ಲಿ ಕರಿ ಮದ್ದಿನಿಂದ ಕೊಂಧಾಕಿದರು.

ಪ್ರ. ಆ ಬಳಿಕ ಸಂಚುಕಾರರು ಏನು ಮಾಡಿದರು ?

ಉ. ಡಾರ್ನ್ಲಿ ರಾಯನ ಕೊಲೆಗೆ ಮುಖ್ಯ ಕಾರಣಕರ್ತನಾಗಿದ್ದಂಥಾ ಬೊಥ್ವೆಲ್ (Bothwell) ಎಂಬವನಂನು ಮೇರಿ ರಾಣಿಯು ಮದಿವೆ ಮಾಡಿಕೊಳ್ಳುವಂತೆ ಕೇಳಿದರು.

ಆ ಕೊಲೆಯ ಗುಮಾನಿಯು ಇರುವ ಮಟ್ಟಿಗೂ ಮಾಡ ಲಾರೆನೆಂದು ರಾಣಿಯು ಹೇಳಿದದರಿಂದ, ಬೊಥ್ವೆಲ್ ಎಂ ಬವನು ತನಗೆ ಅಂಗೀಕಾರರಾದ ನ್ಯಾಯಾಧಿಪತಿಗಳನ್ನು ಕರೆದು ತನ್ನನ್ನು ತಪ್ಪಿಲ್ಲದವನಾಗಿ ತೋರಿಸಿಕೊಂಡನು. ಇನ್ನು ಆ ಮದಿವೆಗೆ ಮೇರಿ ರಾಣಿಯು ರಾಜಿ ಪಡುವದಿ ಲ್ಲವೆಂದು ನೋಡಿ, ಬೊಥ್ವೆಲ್ ಎಂಬವನು ಆಕೆಯನ್ನು ಕಡ್ಡಾಯದಿಂದ ಡನ್‌ಬಾರ್ (Dunbar) ಎಂಬ ಕೋಟೆಗೆ ಕರೆಕೊಂಡ್ಹೋಗಿ, ಆಕೆಗೆ ಅಪಮಾನ ಮಾಡಿ, ತರುವಾಯ ಮದಿವೆ ಸಾಂಗ್ಯಗಳನ್ನು ನೆರವೇರಿಸ ಮಾಡಿದನು.

ಪ್ರ. ಆಗ ಜನರು ಇಂಥಾ ಕಾರ್ಯಗಳನ್ನು ಸುಮ್ಮನೆ ತಾಳಿದರೋ?

ಉ. ಇಲ್ಲ. ರಾಣಿಯ ವೈರಿಗಳು ಬರುಗುಬಾರು ಎಬ್ಬಿಸಿ, ಡಾರ್ನ್ಲಿ ಎಂಬವನ ಕೊಲೆಯನ್ನು ಆಕೆಯ ತಲೆ ಮೇಲೆ ಹೊರಿಸಿ, ಕಡೆಮನೆಯಲ್ಲಿ ಆಕೆಯನ್ನೂ ಆಕೆ ಯ ಪುರುಷನಾದ ಬೊಥ್ವೆಲ್ ಎಂಬವನನ್ನೂ ಇರಿಸಿದರು. ಇವನು ಕೊಂಚದರಲ್ಲಿ ತಪ್ಪಿಸಿ ಕೊಂಡ್ಹೋಗಿ ಸತ್ತನು; ಆದರೆ ರಾಣಿಯ ವೈರಿಗಳೂ ಅವರೊಳಗೆ ಪ್ರಧಾನಿಯಾದ ಮರ್ರೇ (Murray) ಎಂಬವನೂ ಆಕೆಗೆ ಬಲವಂತ ಮಾಡಿ, ತನ್ನ ರಾಜ್ಯಭಾರವನ್ನು ತನ್ನ ಕುಮಾರನಿಗೆ ಒಪ್ಪಿಸಿ ಬಿಡುವಹಾಗೂ, ಆ ಚಿಕ್ಕ ರಾಯನಿಗೆ ಮರ್ರೇ ಎಂಬವ ನನ್ನು ಪಾಲಿಕನಾಗಿ ನೇಮಿಸುವಹಾಗೂ, ಉಪಾಯ ಮಾಡಿದರು.

ಪ್ರ. ಮೇರಿ ಎಂಬವಳು ಶರೆ ಮನೆಯಲ್ಲಿಂದ ರಕ್ಷಿಸಲ್ಪಡಲಿಲ್ಲವೋ?

ಉ. ಹೌದು; ಕೆಲ ಸತ್ಯವಂತರಾದ ಪ್ರಜೆಗಳು ಆಕೆಯನ್ನು ಬಿಡಿಸಿದರು. ಆದರೆ ಆಕೆಯು ತನ್ನ ಲೆಖ್ಖವಿಲ್ಲದ ಶತ್ರುಗಳ ಮೋಸಗಳನ್ನು ತಪ್ಪಿಸಲಶಕ್ತಳಾಗಿ, ಎಲಿಸಬೆಥ್ ಎಂಬ ರಾಣಿಯ ಮೇಲೆ ನಂಬಿಕೆಯನ್ನಿಟ್ಟು, ಇಂಗ್ಲಾಂಡ್ ಸೀಮೆಗೆ ಆಧಾರಕ್ಕೋಸ್ಕರವಾಗಿ ಹೋದಳು.

ಪ್ರ. ಎಲಿಸಬೆಥ್ ಎಂಬ ರಾಣಿಯು ಆಕೆಗೆ ಸಹಾಯ ಕೊಟ್ಟಳೋ?

ಉ. ಅದಕ್ಕೆ ವಿರೋಧವಾಗಿ, ಅವಳು ಮೇರಿ ಎಂಬವಳ ಮೇಲೆ ಇಲ್ಲದ ತಪ್ಪುಗಳನ್ನು ಹೊರಿಸಿ, ಬಂದಿಖಾನೆಯೊಳಗೆ ಹಾಕಿಸಿ, ಹಾಗೆ ಆಕೆಯನ್ನು ೧೯ ವರುಷ ಇರಿಸಿಕೊಂಡಳು. ಮತ್ತು ಮರ್ರೇ ಎಂಬವನನ್ನು ಸ್ಕೊಟ್ಲಾಂಡ್ ದೇಶದ ಪಾಲಿಕನಾಗಿ ನೇಮಿಸಿದಳು.

ಪ್ರ. ಮೇರಿ ಎಂಬವಳಿಗೋಸ್ಕರ ಪುನಹ ಯಾರಾದರೂ ಕಲಹವೆಬ್ಬಿಸಿದರೋ?

ಉ. ಹೌದು; ನೋರ್ಫೋಕ್ ಪಾಳ್ಯಗಾರನೂ ನೋರ್ಥಂಬೆರ್ಲಾಂಡ್ ಮತ್ತು ವೆಸ್ಟ್ಮೋರ್ಲಾಂಡ್ (Westmoreland) ಪ್ರಭುಗಳೂ ಇನ್ನು ಅನೇಕ ಧೊರೆಗಳೂ ಆಕೆಗೋಸ್ಕರವಾಗಿ ಯುದ್ಧ ಮಾಡ ಪ್ರಯತ್ನಿಸಿದರು. ಆದರೆ ಎಲಿಸಬೆಥ್ ರಾಣಿಯೂ ಅವಳ ಚಾತುರ್ಯವುಳ್ಳ ಮಂತ್ರಿಯಾದ ಸೆಸಿಲ್ ಎಂಬವನೂ ಅವರ ಸಂಚು

ವ್ಯರ್ಥ ಪಡಿಸಿದ್ದಲ್ಲದೆ, ಕಲಹಕಾರರೊಳಗೆ ೨೦೦ ಮಂದಿ
ಗಳಂನು ಪ್ರಶಿದ್ಧಿಯಾಗಿ ಕೊಂಧಾಕಿಸಿದರು.

ಪ್ರ. ಎಲಿಸಬೆಥ್ ಎಂಬವಳು ಮೇರಿ ರಾಣಿಯಂನು
ಯಾವ ನೆವನದಿಂದ ಕೊಂಧಾಕಿಸಿದಳು?

ಉ. ತಂನ ಜೀವವಂನು ಮೇರಿ ಎಂಬವಳು ತೆಗೆಯ
ನೋಡುತ್ತಾಳೆಂಧೇಳಿ ಕಚ್ಚೇರಿಗೆ ಅವಳಂನು ಕರೆಯ ಮಾ
ಡಿದಳು. ಅಂಥಾ ದುರಾಲೋಚನೆಯಂನು ಮೇರಿ ಎಂಬ
ವಳು ನಿಜವಾಗಿ ಮಾಡಿ ಇರಲಿಲ್ಲಾ. ಆದಾಗ್ಯೂ ಇಂಗ್ಲಿಷ್
ನ್ಯಾಯಾಧಿಪತಿಗಳು ತಂಮ ರಾಣಿಯಾದ ಎಲಿಸಬೆಥ್
ಎಂಬವಳಿಗೆ ಪ್ರೀತಿ ಪಡುವ ಹಾಗೆ ಮೇರಿ ಎಂಬವಳ ಮೇಲೆ
ಅನ್ಯಾಯದ ತೀರ್ವೆ ಮಾಡಿದರು. ಮತ್ತು ಆಕೆಯ
ಮೇಲೆ ರುಜಿಗೆ ಸಮವಾಗಿ ಯಾವದೊಂದು ದಸ್ತಾವೇಜು
ತೋರಿಸುವ ಹಾಗೆ, ಆಕೆಯ ಅರಿಯಲ್ಲಿ ಎಲಿಸಬೆಥ್ ಎಂ
ಬವಳ ಸೇವಕರು ರಹಸ್ಯವಾಗಿ ಸೇರಿ, ಮೇರಿ ಎಂಬ ರಾಣಿ
ಯ ಕಾಗದಗಳಂನು ಎತ್ತಿ, ಈಕೆಯ ಕೈಬರಹದ ಹಾಗೆ
ಕಳ್ಳ ದಸ್ತಾವೇಜುಗಳಂನು ಬರೆದು, ಆಕೆಯ ಮೇಲೆ ರಾಜ
ದ್ರೋಹದ ತಪ್ಪು ಹೊರಿಸಿದರು.

ಪ್ರ. ಮೇರಿ ಎಂಬವಳ ಮರಣದ ವಿಶೇಷಗಳು ಹ್ಯಾಗೆ?

ಉ. ಆಶ್ಚರ್ಯವಾದ ಸಮಾಧಾನದೊಂದಿಗೂ ಚುರು
ಕಾದ ದೇವ ಭಕ್ತಿಯೊಂದಿಗೂ ಮರಣವಂನು ಅನುಭವಿ
ಸಿದಳು. (೧೫೮೭.)

ಪ್ರ. ಮೇರಿ ಎಂಬ ರಾಣಿಯು ಸತ್ತ ಮೇಲೆ ಎಲಿಸ

ಬೆಥ್ ಎಂಬವಳು ಏನು ಮಾಡಿದಳು ?

ಉ. ಅವಳು ಕಳ್ಳ ದುಖ್ಖವಂನು ತೋರಿಸಿಕೊಂಡು, ದೆವಿಸೊನ್ (Davison) ಎಂಬ ಧೊರೆಯು ಮೇರಿ ರಾಣಿಯ ಮರಣದ ಹುಕುಂ ಪ್ರಕಟ ಮಾಡಿದ್ದರಿಂದ, ನಿತ್ಯ ಬಂದಿಖಾನೆಗೆ ಅವನಂನು ನೇಮಿಸಿದಳು.

ಪ್ರ. ಎಲಿಸಬೆಥ್ ಎಂಬ ರಾಣಿಯ ಕಾಲದಲ್ಲಿ ಇಂಗ್ಲಿಷ್ ಜನರು ಯಾವಾಗಲೂ ಜಯವಂತರಾಗಿದ್ದರೋ ?

ಉ. ಇಲ್ಲ. ಅವರು ಹೊಲಾಂಡ್ ದೇಶದಲ್ಲಿ ಅಪಜಯ ಪಟ್ಟರು. ಯಾತಕ್ಕೆಂದರೆ ದಂಡು ನಡಿಸುವದಕ್ಕೆ ಸಾಮರ್ಥ್ಯವಿಲ್ಲದವನಾಗಿಯೂ ಆದರೆ ತನಗೆ ಬಹು ಪ್ರಿಯನಾಗಿಯೂ ಇದ್ದಂಥಾ ಲೀಸ್ತರ್ ಎಂಬ ಪಾಳ್ಯಗಾರನಂನು ಎಲಿಸಬೆಥ್ ಎಂಬವಳು ಸೇನಾಪತಿಯಾಗಿ ಸ್ಥಾಪಿಸಿ ಇದ್ದಳು.

ಪ್ರ. ಆ ಕಾಲದಲ್ಲಿ ಸ್ಪನಿಷ್ (Spanish) ಜಾತಿಯವರಿಗೂ ಇಂಗ್ಲಿಷ್ ಜಾತಿಯವರಿಗೂ ಒಂದು ಜಗಳ ಆಯಿತಲ್ಲಾ ?

ಉ. ಹೌದು. ಎಲಿಸಬೆಥ್ ಎಂಬವಳು ಮೇರಿ ಸ್ತ್ಯುವರ್ಟ್ ರಾಣಿಯಂನು ಕೊಂಧಾಕಿಸಿದ್ದರಿಂದಲೂ ಇಂಗ್ಲಾಂಡ್ ಸೀಮೆಯಲ್ಲಿ ಪ್ರೊತೆಸ್ತಾಂತ್ ಪತಿತನವಂನು ಸ್ಥಾಪಿಸಿದ್ದರಿಂದಲೂ ಸ್ಪೇನ್ ದೇಶದ ರಾಯನಾದ ೨ ನೇ ಫಿಲಿಪ್ ಎಂಬವನು ದೊಡ್ಡ ಹಡಗಗಳ ಒಂದು ಗುಂಪು ಕೂಡಿಸಿ, ಇಂಗ್ಲಾಂಡ್ ದೇಶದ ಮೇಲೆ ಕಳುಹಿಸಿ ಬಿಟ್ಟನು.

ಪ್ರ. ಆ ದೊಡ್ಡ ಹಡಗುಗಳ ಗುಂಪಿಗೆ ಏನು ಸಂಭವಿಸಿತು ?

ಉ. ಒಂದು ಭಯಂಕರವಾದ ಬಿರುಘಾಳಿ ಸಮುದ್ರದ ಮೇಲೆದ್ದು ಆ ಹಡಗುಗಳೊಳಗೆ ಒಂದು ಪಾಲಂನು ಚದರಿಸಿ ಮುರಿಸಿತು. ಇಂಗ್ಲಿಷ್ ಜಾತಿಯವರ ಹಡಗುಗಳು ಇಂನೊಂದು ಪಾಲಂನು ನಿರ್ಮೂಲ ಮಾಡಿದರು.

ಪ್ರ. ಎಲಿಸಬೆಥ್ ರಾಣಿಯ ಕಾಲದಲ್ಲಿ ಕಾಣಿಸಿದಂಥಾ ಶ್ರೇಷ್ಠ ನಾವಿಕರ್ಯಾರು ?

ಉ. ಡ್ರೇಕ್ (Drake), ಫ್ರೊಬಿಷೆರ್ (Frobisher), ಹಾಕಿನ್ಸ್ (Hawkins) ಎಂಬವರೇ. ಆದರೆ ಇವರು ರಾಣಿಯಿಂದಲೂ ಇವಳ ಮಂತ್ರಿಗಳಿಂದಲೂ ಆದರಿಸಲ್ಪಟ್ಟ ಸಮುದ್ರದ ಕಳ್ಳರೇ ಹೊರತು ಇತರವಲ್ಲವೆಂದು ಒಪ್ಪಿಕೊಳ್ಳ ಬೇಕಾಗಿದೆ.

ಪ್ರ. ಎಲಿಸಬೆಥ್ ಎಂಬ ರಾಣಿಗೆ ಬಹು ಸಾಮರ್ಥ್ಯ ಇರಲಿಲ್ಲವೋ ?

ಉ. ಅವಳಿಗೆ ಸಾಮರ್ಥ್ಯವಿತ್ತೆಂಬುವದಕ್ಕೆ ಸಂದೇಹವಿಲ್ಲಾ. ಆದರೆ ನೀತಿ ಅನೀತಿ ನೋಡದೆ, ಸರ್ವಬಗೆ ಉಪಾಯಗಳಿಂದ ಅವಳೂ ಅವಳ ಮಂತ್ರಿಗಳೂ ತಂಮ ಸ್ವಂತ ಲಾಭ ಮಹಿಮೆಯಂನು ಹುಡುಕುವದರಿಂದ ಸಿದ್ಧಿಸುತ್ತಾ ಇದ್ದರು.

ಪ್ರ. ಎಲಿಸಬೆಥ್ ಎಂಬ ರಾಣಿಯ ಮರಣದ ವಿಶೇಷಗಳು ಯಾವವು ?

ఉ. అవళు ఒందు సమయదల్లి కోపవం గైదు, తాను బహు ప్రీతియాగి స్నేహిసుత్తిద్ద ఎసేక్స ఎంబ ధోరెయన్ను మరణక్కె నేమిసిదళు. అవను సత్త తరువాయ, తన్న దుఃఖవన్ను తాళలారదె, బహు తింగళ మట్టిగూ ఎడబిడదె అళుత్తా ప్రలాపిసుత్తా ఇద్దళు. ఈ వ్యాకులదిందలూ తన్న పాతకగళ విషయదల్లి బందంథా మనసాక్షియ కడితదిందలూ కంగెట్టు, అపథైర్యదల్లి అనర్థవాగి సత్తళు. ఇవళు ౭౦ ప్రాయదవళాగిద్దళు; మత్తు ౪౫ సంవత్సర రాజ్యభార మాడిదళు. (౧౬౦౨.)

## స్త్యువర్ట్ రాయరుగళ రాజ్యభారవు.

### ౧ నే జేంస్ (James I.) (1602 — 1625.)

ప్ర. ఎలిసబెథ్ ఎంబవళిగె బదలాదవన్యారు?

ఉ. డార్న్లి మత్తు మేరి స్త్యువర్ట్ ఎంబవర మగనాద జేంస్ ఎంబవనే.

ప్ర. ఇవనిగె ఇంగ్లిష్ సింహాసనవు సంప్రాప్తిసిద్దరింద జనరిగె సంతోషవాయితో ?

ఉ. కాదు. జేంస్ ఎంబవను ప్యురితన్ (Puritan) ఎంబ ప్రోతెస్తాంతర భ్రమెయుళ్ళ మతా

ಬಾರದಲ್ಲಿ ಸಾಕಲ್ಪಟ್ಟದ್ದರಿಂದ, ತಮಗೆ ಸಹಾಯ ಮಾಡು ವನೆಂಬಧಾಗಿ ಪ್ಯುರಿತನ್ ಎಂಬ ಪತಿತರು ನಂಬುತ್ತಾ ಇದ್ದರು. ಆದರೆ ಅವನ ತಾಯ್ಯಿಯಾದ ಮೇರಿ ಸ್ತ್ಯುವರ್ಟ ಎಂಬ ವಳು ಕಥೋಲಿಕ್ ವೇದಸ್ಥಳಾಗಿದ್ದದಲ್ಲದೆ, ವೇದಕ್ಕಾಗಿ ಹಿಂಸೆ ಪಟ್ಟದ್ದರಿಂದ, ಜೇಂಸ್ ಎಂಬ ರಾಯನು ತಂಮ ಮೇಲೆ ದಯವುಳ್ಳವನಾಗುವನೆಂದು ಕಥೋಲಿಕರು ನೆನಸುತ್ತಿದ್ದರು.

ಪ್ರ. ಜೇಂಸ್ ಎಂಬವನ ನಡತೆಯು ಎಂಥದ್ದಾಗಿತ್ತು ?

ಉ. ಅವನು ಪ್ಯುರಿತರ್ನ ಪತಿತರ ಕಪಟವನ್ನು ಹೇಸುವದರಿಂದ ಕಥೋಲಿಕ್ ವೇದಸ್ಥರಿಗೆ ದಯ ತೋರಿಸು ವನೆಂದು ಮೊದಲು ತೋಚಿತು. ಆದರೆ ರಾಯನಿಗೆ ರಹಸ್ಯದಲ್ಲಿ ಅಂಥಾ ಅಭಿಪ್ರಾಯವು ಇದ್ದಾಗ್ಯೂ, ಪ್ರೋತೆಸ್ತಾಂತರಿಗೆ ಭಯಪಟ್ಟು ಕಥೋಲಿಕರಂನು ಯಥಾಪ್ರಕಾರ ಬಾಧಿಸುತ್ತಾ ಬಂದನು.

ಪ್ರ. ಇದರಿಂದ ಏನಾಯಿತು ?

ಉ. ಕಥೋಲಿಕರೊಳಗೆ ಕೆಲ ಧೊರೆಗಳು, ಗೈ ಫಾಕ್ಸ್ (Guy Fawkes) ಎಂಬ ಒಬ್ಬ ಸರ್ದಾರನೊಂದಿಗೆ ಸಂಚು ಮಾಡಿ, ಜೇಂಸ್ ರಾಯನೂ ಇವನ ಕುಟುಂಬವೂ ಪ್ರಜೆ ದೂತರ ಮನೆಯಲ್ಲಿ ಕೂತಿರುವ ಸಮಯದಲ್ಲಿ, ಆ ಮನೆ ಯನ್ನು ಕರಿಮದ್ದಿನಿಂದ ಸುಟ್ಟು ಎಲ್ಲರಂನು ನಿರ್ಮೂಲ ಮಾಡ ಅಲೋಚಿಸಿದರು.

ಪ್ರ. ಇಂಥಾ ದುರಾಲೋಚನೆಯು ಸಿದ್ಧಿಸಿತೋ ?

ಉ. ಇಲ್ಲ. ಯಾಕೆಂದರೆ, ಪ್ರಜೇ ದೂತರ ಸಭೆ

ಯಲ್ಲಿ ಕಥೋಲಿಕ್ ವೇದಸ್ಥನಾದ ಮೌಂಟೀಗ್ಲ್ (Mount-eagle) ಎಂನಲ್ಪಟ್ಟ ಒಬ್ಬ ಧೊರೆಯು ಇದ್ದನು. ಫಲಾನಿ ದಿನದಲ್ಲಿ ಸಭೆಯ ಮನೆಗೆ ಹೋಗದಂತೆ ಅವನ ಸ್ನೇಹಿತರೊಳಗೆ ಒಬ್ಬನು ಅವನಂನು ಎಚ್ಚರಿಸಿದನು. ಮೌಂಟೀಗ್ಲ್ ಎಂಬವನು ಮಂತ್ರಿಯಾದ ಸಾಲಿಸ್ಬರಿ ಎಂಬ ಧೊರೆಗೆ ಅದಂನು ತಿಳಿಸಿದ್ದರಿಂದ, ಮನೆ ಕೆಳಗೆ ಪರಿಶೋಧನೆ ಉಂಟಾಗಿ, ಮದ್ದು ಕಂಡುಕೊಳ್ಳಲ್ಪಟ್ಟಿತು; ಮತ್ತು ಗೈ ಫಾಕ್ಸ್ ಎಂಬವನು ಅಲ್ಲಿಯೇ ಹಿಡಿಯಲ್ಪಟ್ಟನು.

ಪ್ರ. ಆ ಮನುಷ್ಯನು ನಿರ್ಣಯಿಸಲ್ಪಡುವಾಗ ಹ್ಯಾಗೆ ನಡೆದನು?

ಉ. ನ್ಯಾಯಾಧಿಪತಿಗಳಿಗೆ ಬಹು ದೃಢವಾಗಿ ಜವಾಬು ಕೊಟ್ಟನು; ಮತ್ತು ಬಾಧೆಗಳ ನಿಷ್ಟುರದಿಂದ ಅವನು ಕಡ್ಡಾಯ ಪಟ್ಟನೇ ಹೊರ್ತು, ಇಲ್ಲದಿದ್ದರೆ ತಂನ ಸಂಗಡಿಕಾರರಂನು ಬೈಲು ಮಾಡುತ್ತಿರಲಿಲ್ಲಾ.

ಪ್ರ. ಬೇರೆ ಸಂಚುಕಾರರಿಗೆ ಏನಾಯಿತು?

ಉ. ಕೆಲಬರು ಹಿಡಿಯಲ್ಪಡದ ಹಾಗೆ ಜಗಳ ಮಾಡಿ ಪ್ರಾಣವಂನು ಬಿಟ್ಟರು; ಬೇರೆಯವರು ಹಿಡಿಯಲ್ಪಟ್ಟು ಸಾವಿಗೆ ನಿರ್ಣಯಿಸಲ್ಪಟ್ಟರು.

ಪ್ರ. ಈ ಸಂಗತಿಯ ನಿಮಿತ್ತವಾಗಿ ಪ್ರೊತೆಸ್ತಾಂತರು ಕಥೋಲಿಕರಂನು ಆಕ್ಷೇಪಿಸುವದು ಸರಿಯೋ?

ಉ. ಸರಿಯಲ್ಲಾ. ಯಾಕೆಂದರೆ ಕೆಲ ದುಷ್ಟರು ರಹಸ್ಯವಾಗಿ ಮಾಡಿದಂಥಾ ದುರಾಲೋಚನೆಗೆ ಸಮಸ್ತ

ಕಥೋಲಿಕರು ಪಾಲುಕಾರರಾಗಿರಲಿಲ್ಲ; ಅದಕ್ಕವರು ಜವಾಬುದಾರರಾಗಿರುವದೇ ಇಲ್ಲಾ. ರಾಯನು ತಾನೇ ಇದು ಕೆಲಬರಿಂದ ಮಾತ್ರವೇ ಮಾಡಲ್ಪಟ್ಟ ಫಿತೂರಿ ಎಂಬದಾಗಿ ಒಪ್ಪಿಕೊಂಡನು.

ಪ್ರ. ಜೇಂಸ್ ಎಂಬ ರಾಯನ ಮುಖ್ಯವಾದ ತಪ್ಪು ಯಾವದು?

ಉ. ಕೆಲ ನಿಯೋಗಿಗಳ ಮೇಲೆ ಬುದ್ಧಿ ತಪ್ಪಿದ ಪ್ರೀತಿಯಂನು ಇರಿಸಿದ್ದೇ.

ಪ್ರ. ಆ ನಿಯೋಗಿಗಳ್ಯಾರು?

ಉ. ಸೊಮೆರ್ಸೆತ್ ಪಾಳ್ಯಗಾರನಾದ ರೊಬೆರ್ತ್ ಕಾರ್ ಎಂಬವನೂ, ಬಕ್ಕಿಂಘಂ ಪ್ರಧಾನಿಯಾದ ಜೋರ್ಜ್ ವಿಲೀರ್ಸ್ ಎಂಬವನೂ, ಇವರೇ.

ಪ್ರ. ಆ ರಾಜ್ಯಭಾರದ ಕಾಲದಲ್ಲಿ ಪಾರ್ಲಮೆಂತ್ ಸಭೆಯ ನಡತೆ ಎಂಥದ್ದಾಗಿತ್ತು?

ಉ. ಆ ಸಭೆಯವರು ೮ ನೇ ಹೆನ್ರಿ, ೬ ನೇ ಎದ್ವಾರ್ದ್, ಎಲಿಸಬೆಥ್ ಈ ತ್ಯುದೊರ್ ವಂಶದ ರಾಯರ ಕಾಲದಲ್ಲಿ ತಂಮನ್ನು ನಿರ್ಲಜ್ಜೆಯಾದ ಗುಲಾಮರಾಗಿ ತೋರಿಸಿ ಕೊಂಡಿದ್ದಾಗ್ಯೂ, ಈ ಕಾಲದಲ್ಲಿ ಅತಿ ಗರ್ವಹೊಂದಿ, ಸರಕಾರಕ್ಕೆ ಬೇಕಾದ ಕಂದಾಯಗಳನ್ನು ಮೊದಲಾಗಿ ನಿಷೇಧಿಸಿದರು.

ಪ್ರ. ಆ ಕಾಲದಲ್ಲಿ ಕೊಂಥಾಕಲ್ಪಟ್ಟ ದೊಡ್ಡ ಧೊರೆಯು ಯಾರು?

ಉ. ಸರ್ ವಾಲ್ತೆರ್ ರಾಲೀ (Sir Walter Raleigh) ಎಂಬವನೇ. ರಾಯನು ರಾಜ್ಯಭಾರಕ್ಕೆ ಏರಿದಾಗ, ಅವನು ಸಂಚಿನ ಸಂದೇಹದ ನಿಮಿತ್ತ ತಾವರೆಂಬ ಕೋಟೆಯಲ್ಲಿ ಹಾಕಲ್ಪಟ್ಟಿದ್ದನು. ಬಹು ವರುಷವಾದ ಮೇಲೆ, ತಾನು ಅಮೇರಿಕ ಖಂಡದಲ್ಲಿ ಚಿನ್ನದ ಗಣಿಗಳನ್ನು ಶೋಧಿಸುತ್ತೇನೆಂತ ಹೇಳಿದ್ದರಿಂದ ಅಲ್ಲಿಗೆ ಚಿಕ್ಕ ತುಕ್ಕಡಿಯೊಂದಿಗೆ ಕಳುಹಿಸಲ್ಪಟ್ಟನು. ಚಿನ್ನ ದೊರಕದೆ ಹೋಯಿತು. ಇಂಗ್ಲಾಂಡ್ ಸೀಮೆಗೆ ತಿರಿಗಿ ಖೈದಿಯಾಗಿ ಕರೆಕೊಳ್ಳಲ್ಪಟ್ಟು, ಅಮೇರಿಕದಲ್ಲಿರುವ ಸ್ಪೇನ್ ದೇಶಸ್ತರ ಬಸ್ತಿಪಟ್ಟಣಗಳಲ್ಲಿ ಅನ್ಯಾಯ ಮಾಡಿಸಿದಹಾಗೆ, ಸಾವಿಗೆ ನಿರ್ಣಯಿಸಲ್ಪಟ್ಟನು.

ಪ್ರ. ಜೇಂಸ್ ರಾಯನು ಸಾಯುವಾಗ ಅವನಿಗೆ ಎಷ್ಟು ಪ್ರಾಯವಿತ್ತು?

ಉ. ೫೯ ಪ್ರಾಯದವನಾಗಿದ್ದನು; ೨೨ ವರುಷ ಇಂಗ್ಲಾಂಡಿನಲ್ಲಿ ಆಳಿದನು. ಸ್ಕೊತ್ಲಾಂಡ್ ದೇಶದಲ್ಲಿ ಅವನ ರಾಜ್ಯಭಾರದ ಪ್ರಾರಂಭವು ಏನೆಂದರೆ, ತಂನ ತಾಯ್ಯ ಮರಣವೇ ಸರಿ. ಆಗ ಒಂದೇ ವರುಷದ ಮಗುವಾಗಿದ್ದನು. (೧೬೦೨ — ೧೬೨೫.)

---

## ೧ ನೇ ಚಾರ್ಲ್ಸ್ (Charles I.) (೧೬೨೫ — ೧೬೪೯.)

---

ಪ್ರ. ಚಾರ್ಲ್ಸೆಂಬವನ ರಾಜ್ಯಭಾರವು ಹ್ಯಾಗೆ ತೊಡಗಿತು?

ಉ. ದುರದೃಷ್ಟದಲ್ಲಿಯೇ ತೊಡಗಿತು. ೧ ನೇ ಜೇಂಸ್ ಎಂಬವನ ಅಳಿಯನಾದ ಎಲೆಕ್ಟೊರ್ ಪಲತೀನ್ (Elector Palatine) ಖಿಥಾಬುಳ್ಳ ಫ್ರೆದೆರಿಕ್ (Frederick) ಎಂಬವನು ಅನ್ಯಾಯವಾಗಿ ಸ್ವೀಕರಿಸಿ ಇದ್ದ ಬೊಹೇಮಿಯ (Bohemia) ರಾಜ್ಯವನ್ನು ಹೋಗಲಾಡಿಸಿದ್ದಲ್ಲದೆ, ತಂನ ಸ್ವಂತ ಇಲಾಖೆಯಂನು ಸಹಾ ಕಳಕೊಂಡಿದ್ದನು. ಜೇಂಸೆಂಬ ರಾಯನು ಅವನಿಗೆ ಸಹಾಯವಾಗಿ ಒಂದು ದಂಡು ಕಳುಹಿಸಿಯಿದ್ದಾಗ್ಯೂ, ಅದು ಅಂಟುರೋಗದಿಂದ ಬೇಗ ನಿರ್ಮೂಲವಾಯಿತು. ಇಂಥಾ ಯುದ್ಧವಂನು ಸಾಧಿಸುವ ಭಾರವು ೧ ನೇ ಚಾರ್ಲ್ಸೆಂಬವನಿಗೆ ಸಂಪ್ರಾಪ್ತಿಸಿತು.

ಪ್ರ. ಇದಕ್ಕೆ ರಾಯನು ಏನು ಪ್ರಯತ್ನ ಮಾಡಿದನು?

ಉ. ಆ ಯುದ್ಧಕ್ಕೆ ಬೇಕಾದ ರುಣವಂನು ಹೌಸ್ ಒವ್ ಕೊಮನ್ಸೆಂಬ ಪ್ರಜೆಗಳ ಸಭೆಯಿಂದ ಕೇಳಿದನು. ಅವರು ಬರೀ ತಕರಾರು ಮಾಡಿದ ಮೇಲೆ, ಆ ಜಗಳಕ್ಕೆ ಬೇಕಾದ ರುಣವನ್ನು ನೇಮಿಸದೆ ಹೋದರು.

ಪ್ರ. ಆಗ ರಾಯನು ಏನು ಮಾಡಿದನು?

ಉ. ಪ್ರಜೆಗಳ ಸಭೆಯು ಇಲ್ಲದೆ ರಾಜ್ಯದ ಕಾರ್ಯಗಳನ್ನು ನಡಿಸ ಬರುದೆಂದೆಣಿಸಿ, ಪಾರ್ಲಮೆಂಟೆಂಬ ಸಭೆಯನ್ನು ಬರತರವು ಮಾಡಿದನು.

ಪ್ರ. ಇನ್ನೊಂದು ಕಾರಣದಿಂದ ಚಾರ್ಲ್ಸ್ ರಾಯನು ಪ್ರಜೆಗಳ ಕೋಪವನ್ನೆಬ್ಬಿಸಿದನೋ?

ಉ. ಹೌದು, ಹಡಗ ಸುಂಕ ಎಂಬ ಕಂದಾಯ ಸ್ಥಾಪಿಸಿದ್ದರಿಂದಲೇ. ಅದಂನು ಹೊಸ ಹಡಗಗಳಂನು ಮಾಡಿಸುವದಕ್ಕೆ ಕೇಳಿ, ಯಾವಾಗಲೂ ಅದೇ ಉದ್ದೇಶಕ್ಕಾಗಿ ಪ್ರಯೋಗಿಸಿದಾಗ್ಯೂ, ಕೆಲವರಿಗೆ ಸರಿಪಡದೆಹೋಯಿತು.

ಪ್ರ. ಕಲಹಕಾರರೊಳಗೆ ಅಧಿಕ ಪ್ರಸಿದ್ಧಿಯಾದವನ್ಯಾರು ?

ಉ. ಬಕ್ಕಿಂಘಂ ಇಲಾಖೆಯಲ್ಲಿದ್ದ ಜಾನ್ ಹಂಪ್ಡೆನ್ (John Hampden) ಎಂಬ ಧೊರೆಯಾದವನೇ.

ಪ್ರ. ಇನ್ನೊಂದು ಗುಬಾರು ಉಂಟಾಯಿತೋ ?

ಉ. ಹೌದು. ಚಾರ್ಲ್ಸ್ ರಾಯನು ಸ್ಕೊತ್ಲಾಂಡಿನಲ್ಲಿ ತಂನ ಅಂಗ್ಲಿಕನ್ (Anglican) ಮತದ ಜಪ ಸಾಂಗ್ಯಗಳನ್ನು ಸೇರಿಸ ಪ್ರಯಾಸ ಪಟ್ಟದ್ದರಿಂದ, ಆ ಸೀಮೆಯ ಪತಿತರು ಕಲಹವೆಬ್ಬಿಸಿದರು.

ಪ್ರ. ಅಂಥ ಕಲಹ ನೀಗಿಸುವ ಬಗ್ಯೆ ಚಾರ್ಲ್ಸ್ ರಾಯನು ಏನು ಮಾಡಿದನು ?

ಉ. ತಾನು ಒಂದು ಹೊಸ ಪಾರ್ಲಮೆಂಟ್ ಸಭೆಯನ್ನು ಜಮೆ ಮಾಡಿದನು.

ಪ್ರ. ಆ ಹೊಸ ಸಭೆಯವರು ರಾಯನಿಗೆ ವಿಧೇಯಸ್ಥರಾದರೋ ?

ಉ. ಇಲ್ಲ. ಕಲಹ ಅಣಗಿಸುವಂತೆ ರಾಯನಿಗೆ ಕಂದಾಯ ನೇಮಿಸದೆ, ಆತನ ಪ್ರಧಾನ ಮಂತ್ರಿಯಾದ ಸ್ತ್ರಫೋರ್ಡ್ ಎಂಬವನ ಮೇಲೆ ಮರಣಕ್ಕೆ ತಕ್ಕ ತಪ್ಪು ಹೊರಿಸಿದರು.

[ಐರ್ಲಾಂಡ್ ದೇಶದವರನ್ನು ಬಹು ಕ್ರೂರವಾಗಿ ಬಾಧಿಸಿದ್ದರಿಂದ, ನಿಜವಾಗಿ ಸಾವಿಗೆ ಪಾತ್ರನಾಗಿದ್ದನು.] ರಾಯನೋ ಅಂದರೆ, ಪಾರ್ಲಮೆಂಟ್ ಸಭೆಗೆ ಭಯಪಟ್ಟು ತನ್ನ ಮಂತ್ರಿಯ ಶಿಕ್ಷೆಗೆ ರಾಜೀ ಪಟ್ಟನು.

ಪ್ರ. ಪಾರ್ಲಮೆಂಟ್ ಸಭೆಯವರು ಇನ್ನು ಬೇರೆ ಯಾವನನ್ನು ಸಾವಿಗೆ ನೇಮಿಸಿದರು ?

ಉ. ಬಹು ವಯಸ್ಸೂ ವಿದ್ಯವೂ ಉಳ್ಳಂಥಾ ಕಾಂತೆರ್ಬರಿ ಪಟ್ಣದ ಪ್ರೋತೆಸ್ತಾಂತ್ ಅತಿ ಮೇತ್ರಾಣಿಯಾದ ಲೋಡ್ (Laud) ಎಂಬವನನ್ನು ಸಾವಿಗೆ ನಿರ್ಣಯಿಸಿದರು.

ಪ್ರ. ಅದಕ್ಕೆ ಏನು ಕಾರಣವಾಯಿತು ?

ಉ. ಲೋಡೆಂಬ ಮೇತ್ರಾಣಿಯು ಕಥೋಲಿಕರ ಹಾಗೆ ಸಾಂಗ್ಯ ಕಟ್ಟಳೆಗಳನ್ನು ಕಾವಿಸಿ ಜನರ ಮೇಲೆ ಹೊರಿಸುತ್ತಾನೆಂಧೇಳಿ ಪ್ಯುರಿರ್ತ ಮತಾಚಾರವಾಗಿದ್ದ ಪಾರ್ಲಮೆಂಟ್ ಸಭೆಯವರು ಅವನನ್ನು ಆಕ್ಷೇಪಿಸುತ್ತಿದ್ದರು.

ಪ್ರ. ಇದರ ತರುವಾಯ ಪಾರ್ಲಮೆಂಟ್ ಸಭೆಯವರು ಏನು ಮಾಡಿದರು ?

ಉ. ಚಾರ್ಲ್ಸ್ ರಾಯನಿಗೆ ವಿರೋಧವಾಗಿ ಒಂದು ದಂಡು ಕೂಡಿಸಿದರು. ಮತ್ತು ಆ ಕಲಹಕಾರರು ತಮ್ಮ ತಲೆ ಕೂದಲು ಬಹುಶ ಗಿಡ್ಡವಾಗಿ ಕತ್ತರಿಸಿಕೊಳ್ಳುತ್ತಿದ್ದ ನಿಮಿತ್ತ, ಗುಂಡು ತಲೆ ಎಂಬರ್ಥವಾಗಿ ರೌಂಢೆಡ್ (Round-head) ಎಂಬ ಹೆಸರು ಹೊಂದಿದರು. ರಾಯನ ಪ್ರಜೆಗ

ಳೆಯಾ ಅಂದರೆ, ಕವಲೀರ್ (Cavaliers) ಅಡ್ಡನಾಮವಂ ಗೊಂಡರು.

ಪ್ರ. ಯಾವ ಪಟ್ಣದಲ್ಲಿ ಕಲಹ ತೊಡಗಿತು ?

ಉ. ಮೊದಲು ಯೋರ್ಕ್ ಇಲಾಖೆಯಲ್ಲಿರುವ ಹಲ್ (Hull) ಪಟ್ಣದಲ್ಲಿಯೇ. ಆ ಬಳಿಕ ಹೆಡ್ಜ್ ಹಿಲ್ (Hedge-hill) ಎಂಬ ಸ್ಥಳದಲ್ಲಿ ಬಹು ನಿಷ್ಠುರವಾದ ಜಗಳ ಉಂಟಾಗಿ, ಉಭಯ ಪಾರ್ಶ್ವದವರು ಗೆಲ್ಲದೆ ಹೋದರು. ಸ್ತ್ರರ್ತಹಿಲ್ (Stratton-hill), ನ್ಯೂಬರಿ (New-bury), ಈ ಎರಡು ಸ್ಥಳಗಳಲ್ಲಿ ರಾಯನ ಸೇವಕರಿಗೆ ಜಯವು ಸಂಪ್ರಾಪ್ತಿಸಿದಾಗ್ಯೂ, ಕೊಂಚದರೊಳಗೆ ಸೋತು ಬಿದ್ದರು.

ಪ್ರ. ಇದರ ವಿವರವನ್ನು ಹೇಳು.

ಉ. ಮೊದಲು ಮಾರ್ಸ್ತನ್ ಮೂರ್ (Marston-Moor) ಎಂಬ ಸ್ಥಳದಲ್ಲಿ ರಾಯನ ಪಾರ್ಶ್ವದವರು ಜಯಿಸಲ್ಪಟ್ಟರು. ಆಗ ಒಲಿವೆರ್ ಕ್ರೊಮ್ವೆಲ್ (Oliver Cromwell) ಎಂಬವನು ಸರದಾರರೊಳಗೆ ಒಬ್ಬನಾಗಿದ್ದನು. ತಿರಿಗಿ ರಾಯನ ದಂಡು ನೇಸ್ಬಿ (Naseby) ಸ್ಥಳದಲ್ಲಿ ಮುರಿಯಲ್ಪಟ್ಟದರಿಂದ, ನಿರ್ಭಾಗ್ಯಸ್ಥನಾದ ಚಾರ್ಲ್ಸೆಂಬವನು ಆಧಾರಕ್ಕೋಸ್ಕರವಾಗಿ ಸ್ಕೊತ್ಲಾಂಡ್ ದೇಶಕ್ಕೆ ಓಡಿ ಹೋಗ ಬೇಕಾಯಿತು.

ಪ್ರ. ಸ್ಕೊತ್ ದೇಶಸ್ಥರು ಏನು ಮಾಡಿದರು ?

ಉ. ಅವರು ರಾಯನನ್ನು ತಂನ ಶತೃಗಳಾದ ಪಾರ್ಲಮೆಂತವರಿಗೆ ಒಪ್ಪಿಸಿ, ಅಂಥ ದ್ರೋಹಕ್ಕಾಗಿಽ ಲಕ್ಷ

ಪೌಂಡ್ (pound) ಋಣವನ್ನು ತೆಗದುಕೊಂಡರು. (೪೦ ಲಕ್ಷ ರೂಪಾಯಿ.)

ಪ್ರ. ರಾಯನ ಗತಿ ಎಂಥದ್ದಾಯಿತು ?

ಉ. ಮೊದಲು ವೈಟ್ ದ್ವೀಪದಲ್ಲಿಯೂ, ತರುವಾಯ ಲೊಂಡನ್ ಪಟ್ಣದಲ್ಲಿಯೂ ಶರೆಯಾಗಿ ಇರಿಸಲ್ಪಟ್ಟನು. ಮತ್ತು ಪಾರ್ಲಮೆಂತವರಿಗೆ ತಲೆಯಾಗಿದ್ದ ಒಲಿವೆರ್ ಕ್ರೊಮ್ವೆಲೆಂಬವನು ರಾಯನ ಮರಣ ಪ್ರಯತ್ನಿಸತೊಡಗಿದನು.

ಪ್ರ. ಅದು ಹ್ಯಾಗೆ ?

ಉ. ಪಾರ್ಲಮೆಂತಿನಲ್ಲಿದ್ದ ಪ್ರೆಸ್ಬಿತೇರಿಯನ್ ಪತಿತರು ರಾಯನಿಗೆ ಒತ್ತಾಸೆ ಮಾಡ್ಯಾರು ಎಂಥೇಳಿ, ಕ್ರೊಮ್ವೆಲೆಂಬವನು ೨ ಪಟಾಲಗಳ ಸಂಗಡ ಪ್ರೈಡ್ (Pride) ಎಂಬ ಧೊರೆಯನ್ನು ಪಾರ್ಲಮೆಂತ್ ಸಭೆಯ ಆಲಯಕ್ಕೆ ಕಳುಹಿಸಿ, ಅವನು ಪ್ರೆಸ್ಬಿತೇರಿಯನ್ ಸಭೆಯಸ್ಥರೆಲ್ಲರನ್ನು ಖೈದಿನಲ್ಲಿ ಹಾಕುವ ಹಾಗೆಯೂ ಇಂಡಿಪೆಂಡೆಂತೆಂಬ ಕಲಕುಕಾರರನ್ನು ಮಾತ್ರ ಬಿಡುಗಡೆಯಾಗಿ ನಿಲ್ಲಿಸುವ ಹಾಗೆಯೂ ಕಟ್ಟಳೆ ಮಾಡಿದನು.

ಪ್ರ. ಅಂಥ ಸಂಗತಿಗೆ ಏನು ಅಡ್ಡನಾಮವಾಯಿತು?

ಉ. ಹೀಗೆ ಪ್ರೈಡೆಂಬವನು ಸಭೆಯಸ್ಥರನ್ನು ಓಡಿಸಿದಂಥಾ ಕೃತ್ಯಕ್ಕೆ ಪ್ರೈಡೆಂಬವನ ಭೇದಿ (ಪ್ರೈಡ್ಸ್ ಪರ್ಜ್) (Pride's Purge) ಎಂತಲೂ, ನಿಂತಂಥಾ ಸಭೆಯಸ್ಥರಗುಂಪಿಗೆ ಪಿರ್ರೆಲುಬು (ರಂಪ್) (Rump) ಎಂತಲೂ, ಜನರು

ಅಡ್ಡ ನಾಮವನ್ನಿಕ್ಕಿದರು.

ಪ್ರ. ಆ ಪಾರ್ಲಮೆಂಟ್ ಸಭೆಯು ಏನು ನಿಷ್ಕರ್ಷೆ ಮಾಡಿತು?

ಉ. ಪ್ರೈಡೆಂಬವನ ನಡತೆಯು ನ್ಯಾಯವಾದದ್ದಾಯಿತೆಂದೂ, ಮತ್ತು ತಂಮ ಪ್ರಜೆಗಳ ಸಭೆಗೆ ವಿರೋಧವಾಗಿ ಯುದ್ಧ ಮಾಡಿದ್ದರಿಂದ ರಾಯನು ದ್ರೋಹಿಯೂ ಸಾವಿಗೆ ಪ್ರಾಪ್ತನೂ ಆಗಿದ್ಧಾನೆಂದೂ, ನಿಷ್ಕರ್ಷೆ ಮಾಡಿತು.

ಪ್ರ. ಅದಕ್ಕೆ ಅನುಸಾರವಾಗಿ ನಡೆದರೋ?

ಉ. ಹೌದು. ನಿರ್ಭಾಗ್ಯಸ್ಥನಾದ ರಾಯನು ವೆಸ್ತ್ಮಿನ್ಸ್ತೆರೆಂಬ ಆಲಯದಲ್ಲಿ ತೀರ್ಪೆ ಹೊಂದಿ, ತಲೆ ಹೊಡಿಸಲ್ಪಡುವಹಾಗೆ ನಿರ್ಣಯಿಸಲ್ಪಟ್ಟನು. ಮತ್ತು ೧೬೪೯ ನೇ ಇಸವಿ ಜನುವರಿ ತಿಂಗಳ ಮೂವತ್ತನೇ ತಾರೀಖಿನಲ್ಲಿ ತಂನ ಸ್ವಂತ ಅರಮನೆಯ ಮುಂದೆ ಮರಣ ಹೊಂದಿದನು. ೧೬೨೫ ನೇ ಇಸವಿ ತಂನ ತಂದೆಗೆ ಬದಲಾಗಿ ಸಿಂಹಾಸನ ಏರಿ ಇದ್ದನು.

ಪ್ರ. ಅವನ ಸಂಹಾರಕ್ಕೆ ಇಂಗ್ಲಿಷ್ ಪ್ರಜೆಗಳೆಲ್ಲರು ಸಂಮತಿ ಪಟ್ಟಿದ್ದರೋ?

ಉ. ಎಷ್ಟುಮಾತ್ರವಿಲ್ಲ. ಅವನ ಸಾವಿನ ಸುದ್ದಿಯು ಸೀಮೆಯೆಲ್ಲಕ್ಕೆ ದುಃಖವನ್ನೂ ಭಯವನ್ನೂ ತಂದಿತು.

ಪ್ರ. ೧ ನೇ ಚಾರ್ಲ್ಸೆಂಬವನ ಗುಣವು ಎಂಥದ್ದಾಗಿತ್ತು?

ಉ. ಅವನು ಹೆಚ್ಚಾದ ಸ್ವಾತಂತ್ರಿಕೆಯಿಂದ ಜನರನ್ನು ನಡಿಸಿದ್ದಾಗ್ಯೂ, ಪಾರ್ಲಮೆಂಟ್ ಸಭೆಯವರು ಅವನಿಗೆ

ಮಾಡಿದ ಆಟಂಕವು ಸರ್ವ ಅನ್ಯಾಯವಾಗಿತ್ತು. ಮತ್ತು ಇವನನ್ನು ಮರಣಕ್ಕೆ ನಿರ್ಣಯಿಸುವ ಅಧಿಕಾರ ಅವರಿಗೆ ಇರಲಿಲ್ಲಾ. ಇವನ ಗುಣವು ಶಾಂತವಾಗಿತ್ತು; ಮತ್ತು ಸ್ನೇಹಿತನಿಗೂ ತಂದೆಗೂ ಪತಿಗೂ ತಕ್ಕ ಅಂತಃಕರುಣೆ ಹೊಂದಿದವನಾಗಿದ್ದನು.

## ಪ್ರಜೇಧೊರೆತನ. (Commonwealth.)

(೧೬೪೯ — ೧೬೬೦)

ಪ್ರ. ಚಾರ್ಲ್ಸ್ ರಾಯನು ಸತ್ತ ಮೇಲೆ ಧೊರೆತನದಲ್ಲಿ ದೊಡ್ಡ ಮಾರ್ಪಡುವಿಕೆ ಆಯಿತೋ?

ಉ. ಹೌದು; ಇಂಗ್ಲಿಷ್ ಪಾರ್ಲಮೆಂಟಿನವರು ಪ್ರಜೆಗಳ ಆಧೀನದಲ್ಲಿ ಧೊರೆತನವು ಇರಬೇಕೆಂದು ಆಲೋಚಿಸಿದರು. ಆದರೆ ಸ್ಕೊಟ್ ದೇಶಸ್ಥರು ಸತ್ತ ರಾಯನ ಕುಮಾರನಾದ ಚಾರ್ಲ್ಸಂಬವನನ್ನು ತಮಗೆ ಅರಸನಾಗಿ ನೇಮಿಸಿಕೊಂಡರು.

ಪ್ರ. ಆ ವೇಳೆಯಲ್ಲಿ ಇಂಗ್ಲಿಷಿನವರು ಏನು ಮಾಡಿದರು?

ಉ. ಒಂದು ದಂಡು ಕೂಡಿಸಿ, ಇದಕ್ಕೆ ಕ್ರೊಮ್ವೆಲಂಬವನನ್ನು ಸೇನಾಪತಿಯಾಗಿ ನೇಮಿಸಿ, ಸ್ಕೊತ್ಲಾಂಡ್ ಸೀಮೆಗೆ ಯುದ್ಧಮಾಡ ಕಳುಹಿಸಿದರು. ಮತ್ತು ಆ ಕ್ರೊಮ್ವೆಲಂಬವನು ವೀರಶೂರನಾಗಿದ್ದದರಿಂದಲೂ ಸ್ಕೊತಿನವರು

ತಂವು ಪಾದ್ರಿಗಳಿಗೆ ದಂಡಿನ ವಿಚಾರಣೆ ಒಪ್ಪಿಸಿದ್ದರಿಂದಲೂ ಸ್ಕಾತ್ ರಾಣುವೆಯು ಮುರಿಯಲ್ಪಟ್ಟಿತು.

ಪ್ರ. ಅಂಥಾ ತರುಣದಲ್ಲಿ ಚಾರ್ಲ್ಸ್ ರಾಯನು ಏನು ಮಾಡಿದನು ?

ಉ. ಮೊದಲು ಇಂಗ್ಲಾಂಡ್ ದೇಶಕ್ಕೆ ಓಡಿ ಹೋದನು. ಆದರೆ ಕ್ರಾಮ್ವೆಲೆಂಬವನು ಅವನನ್ನು ಬೆಂನಟ್ಟಿದದರಿಂದ ವೊರ್ಸ್ಟೆರ್ (Worcester) ಎಂಬ ಪಟ್ಣದ ಸಮಿಾಪದಲ್ಲಿ ಇಂನೊಂದು ಜಗಳಮಾಡ ಬೇಕಾಯಿತು. ಚಾರ್ಲ್ಸೆಂಬ ರಾಯನು ಬಹು ಧೈರ್ಯದೊಂದಿಗೆ ಹೋರಾಡಿದಾಗ್ಯೂ, ಕಡೆಯಲ್ಲಿ ಸೋತು, ಓಡಿ ಹೋದನು. ಮತ್ತು, ೪೧ ದಿವಸದ ತನಕ ಹೇಳಕೂಡದಂಥಾ ಶ್ರಮೆಗಳಂನು ಅನುಭವಿಸಿದ ತರುವಾಯ, ಫ್ರಾಂನ್ಸ್ ರಾಜ್ಯದ ತಾಲೂಕಾಗಿರುವ ನೊರ್ಮಂಡಿಗೆ ಸುರಕ್ಷಿತವಾಗಿ ಸೇರಿದನು.

ಪ್ರ. ಕ್ರಾಮ್ವೆಲೆಂಬವನು ತಂನ ಅಧಿಕಾರವನ್ನು ಹೆಚ್ಚಿಸ ಅಪೇಕ್ಷಿಸಿದನೋ ?

ಉ. ಹೌದು. ಮತ್ತು ಲೊಂಗ್ ಪಾರ್ಲಮೆಂಟ್ (Long Parliament) ಎಂಬ ಸಭೆಯವರಂನು ತಂನ ಸಿಪಾಯಿಗಳ ಮೂಲವಾಗಿ ತಳ್ಳಿಬಿಟ್ಟನು. ಅವರಿಗೆ ಬದಲಾಗಿ ಬೇಬೋನ್ (Barebone) ಎಂಬ ಇಂನೊಂದು ಪಾರ್ಲಮೆಂಟ್ ಸಭೆಯನ್ನು ನೇಮಿಸಿಕೊಂಡನು. ಬೇಬೋನೆಂಬ ಒಬ್ಬ ಗೋಸಂಗಿಯವನು ಆ ಸಭೆಯಸ್ತರಲ್ಲಿ ಸೇರಿ ಇದ್ದದರಿಂದ, ಆ ಸಭೆಗೆ ಬೇರ್ಬೋನೆಂಬ ಹೆಸರಾಯಿತು.

ಪ್ರ. ಅದು ಬಹು ದಿವಸದ ವರಿವಿಗೂ ನೆಲೆಗೊಂಡಿತೋ ?

ಉ. ಇಲ್ಲ; ಮತ್ತು ಕ್ರೋಮ್ವೆಲೆಂಬವನ ಉದ್ದೇಶ್ಯವು ಹಾಗಿತ್ತು. ಆದದರಿಂದ ಆ ಸಭೆಗೆ ಬದಲಾಗಿ ಸೇನಾಪತಿಗಳ ಒಂದು ಕೂಟ ನೇಮಿಸಿ, ಇವರಿಂದ ಪಾಲಕನೆಂಬ ನಾಮಧೇಯವನ್ನೂ (ಲೋರ್ಡ್ ಪ್ರೋಟೆಕ್ಟರ್) (Lord Protector) ಅಧಿಕಾರವನ್ನೂ ತನಗೆ ಕೊಡಿಸಿದನು. ತಾನು ಕಪಟವಾದ ಮನ ದೀನತೆಯನ್ನು ತೋರಿಸಿ ಕೊಂಡಿದ್ದಾಗ್ಯೂ, ಅಂಥಾ ಖಿಥಾಬಿನ ಮಾರೀಫತ್ತು ರಾಯನಿಗಿಂತಾ ಅಧಿಕವಾದ ಅಧಿಕಾರವನ್ನು ವಹಿಸಿಕೊಂಡವನಾಗಿದ್ದನು.

ಪ್ರ. ಕ್ರೋಮ್ವೆಲೆಂಬವನ ರಾಜ್ಯಭಾರವು ಎಂಥದ್ದಾಗಿತ್ತು?

ಉ. ಬಹು ಜಾಗ್ರತೆಯೂ ಸಾಮರ್ಥ್ಯವೂ ಉಳ್ಳದಾಗಿತ್ತು. ಮತ್ತು ಅವನಿಂದ ಭಾರಿ ಸಂಬಳ ಹೊಂದುತ್ತಿದ್ದಂಥಾ ಕಾಲುವೆಯುವರು ಅವನ ಪಾರ್ಶ್ವದವರಾಗಿದ್ದರು.

ಪ್ರ. ಇವನ ಕಾಲದಲ್ಲಿ ಇಂಗ್ಲಿಷವರು ಸಮುದ್ರದ ಮೇಲೆ ಯಾವಹೊಂದು ಜಯಗೊಂಡರೋ ?

ಉ. ಹೌದು. ಕ್ರೋಮ್ವೆಲ್ ಡಚಿನವರಿಗೆ (Dutch) ಇಂಗ್ಲಿಷ್ ರೇವುಗಳ ವ್ಯಾಪಾರ ನಿಷೇಧಿಸಿದ್ದರಿಂದ, ಇವರ ಸೇನಾಪತಿಯಾದ ವಾನ್ ಟ್ರೋಂಪ್ (Van Tromp) ಎಂಬವನು ಹಡಗಗಳನ್ನು ಕೂಡಿಸಿ ಇಂಗ್ಲಾಂಡ್ ಧಡಕ್ಕೆ ಸಮೀಪಿಸಿದನು. ಆದರೆ ಇಂಗ್ಲಿಷ್ ಸೇನಾಪತಿಯಾದ ಬ್ಲೇಕ್ (Blake) ಎಂಬವನು ಹಡಗಗಳೊಂದಿಗೆ ಅವನಿಗೆ ಎದುರಾಗಿ ಬಂದು,

ಅವನ್ನ ಜಯಿಸಿದನು. ಇವನು ಸ್ಪೇನ್ ದೇಶಸ್ತರಿಗೆ ಸರಂ ನಷ್ಟ ಬರಮಾಡಿದನು.

ಪ್ರ. ಕ್ರಾಮ್ವೆಲೆಂಬವನು ತಂನ ಅಧಿಕಾರವಂನು ಸಮಾಧಾನವಾಗಿ ಅನುಭವಿಸಿದನೋ ?

ಉ. ಇಲ್ಲ. ಮೊದಲು, ಅವನ ಕುಟುಂಬದಲ್ಲಿಯೇ ಇವನ ರೆಣ್ಣುಮಕ್ಕಳು ಏಡಬಿಡದೆ ಇವನಿಗೆ ವಿರೋಧವಾಗಿದ್ದರು. ಇದಲ್ಲದೆ, ಇವನ ದೌಲತ್ತಿಗೂ ಜೀವಕ್ಕೂ ಮೋಸವಾದ ಸಂಚುಗಳು ದಿನಂಪ್ರತಿ ಬೈಲಾಗುವದರಿಂದ ಇವನಿಗೆ ಸಮಾಧಾನ ತಪ್ಪಿ, ತಾನು ಮಲಗುತ್ತಿದ್ದ ಅರೆಯನ್ನು ಯಾವಾಗಲೂ ಬದಲಾಯಿಸಿಕೊಂಡು, ತಂನ ಉಡುಪಿನ ಕೆಳಗೆ ವಜ್ರಾಂಗಿ ಧರಿಸಿ, ಜೇಬಿನಲ್ಲಿ ನಿತ್ಯವೂ ಪಿಸ್ತೋಲು ಮಡಗಿ, ಕಡೆಯಲ್ಲಿ ಅಂಥಾ ಚಿಂತೆಯನ್ನು ತಾಳಲಾರದೆ, ಅಪಧೈರ್ಯದಲ್ಲಿ ಬಿದ್ದು ಜ್ವರದಿಂದ ಸತ್ತನು. (೧೬೫೮.) ಅವನು ೫೯ ಪ್ರಾಯದವನಾಗಿದ್ದನು, ೬ ವರುಷ ಪಾಲಕನೆಂಬ ಖಿತಾಬು ವಹಿಸಿ ಕೊಂಡಿದ್ದನು.

ಪ್ರ. ಇವನ ಗುಣವು ಎಂಥಾದ್ದು ?

ಉ. ಅವನು ಜಾಣತನ ಉಳ್ಳವನಾಗಿಯೂ ಆದರೆ ಕಪಟಸ್ಥನೂ ಕ್ರೂರನೂ ಆಗಿಯೂ ಇದ್ದನೆಂಬುವದಕ್ಕೆ ಸಂದೇಹವಿಲ್ಲ.

ಪ್ರ. ಇವನಿಗೆ ಬದಲಾದವನ್ಯಾರು ?

ಉ. ಇವನ ಕುಮಾರನಾದ ರಿಚರ್ಡ್ ಎಂಬವನೇ. ಇವನು ಕುಶಾಲೂ ಸಮಾಧಾನವೂ ಆದ ಮನುಷ್ಯನೇ;

ಮತ್ತು ಪ್ರಜೇಧೊರೆತನಕ್ಕಿಂತಾ ರಾಯನ ಅಧಿಕಾರವನ್ನು ಅಧಿಕವಾಗಿ ಮೆಚ್ಚುತ್ತಿದ್ದನು.

ಪ್ರ. ರಿಚರ್ಡೆಂಬವನು ಪಾಲಕನೆಂಬ ಉದ್ಯೋಗವ ಬಹುಕಾಲ ನಿರ್ವಹಿಸಿದನೋ?

ಉ. ಇಲ್ಲ. ಫ್ಲೀತ್ವುಡ್ (Fleetwood) ಎಂಬ ಧೊರೆಯು ಅವನಿಗೆ ಬದಲಾಗಿ ತನ್ನನ್ನು ಸ್ಥಾಪಿಸಿಕೊಂಡನು. ಆದರೆ ಮೊಂಕ್ (Monk) ಎಂಬ ಸೇನಾಪತಿ ಅವನನ್ನು ಸಹಾ ತಳ್ಳುವದಕ್ಕೂ ನ್ಯಾಯವಾದ ರಾಯನನ್ನು ತಿರಿಗಿ ಸ್ಥಾಪಿಸುವದಕ್ಕೂ ಉಪಾಯ ಮಾಡಿದನು.

ಪ್ರ. ಮೊಂಕೆಂಬವನು ತನ್ನ ಅಭಿಪ್ರಾಯವನ್ನು ಹ್ಯಾಗೆ ನೆರವೇರಿಸಿದನು?

ಉ. ಅವನು ದಂಡಿನವರಿಗೆ ಶ್ರೇಷ್ಠನಾಗಿ ಇದ್ದದರಿಂದ, ಹೊಲಾಂಡ್ ದೇಶದಲ್ಲಿದ್ದ ೨ ನೇ ಚಾರ್ಲ್ಸೆಂಬವನಿಗೆ ತಿಳಿಸಿದ್ದೇನೆಂದರೆ: "ಕಲಹಕಾರರಿಗೆ ನೀವು ಮಾಫು ಮಾಡ ಒಪ್ಪಿಕೊಂಡರೆ, ನಿಮ್ಮನ್ನು ತಿರಿಗಿ ಸಿಂಹಾಸನದ ಮೇಲೆ ಸ್ಥಾಪಿಸುವೆನು," ಎಂದು ತಿಳಿಸಿದನು. ರಾಯನು ಇದಕ್ಕೆ ರಾಜೀಪಟ್ಟದರಿಂದ ಮೊಂಕೆಂಬ ಸೇನಾಪತಿಯು ದಂಡಿನ ಸಂಗಡ ಲೊಂಡನ್ ಪಟ್ಟಣಕ್ಕೆ ಬಂದು, ಪಿರ್ರೆಲುಬು ಪಾರ್ಲಮೆಂಟ್ ಒಡಿಸಿ, ಇನ್ನೊಂದನ್ನು ಮೊಕರರಾರು ಮಾಡಿ, ಇವರಿಗೆ ರಾಯನ ಮನ್ನಣೆಯ ನಿರೂಪವನ್ನು ತೋರಿಸಿದನು.

ಪ್ರ. ಇವರು ಈ ಸುದ್ದಿಯನ್ನು ಯಾವ ಮನಸ್ಸಿನಿಂದ ಅಂಗೀಕರಿಸಿದರು?

ಉ. ಎಲ್ಲರು ಸಂತೋಷಪಟ್ಟು, ರಾಯನ ನಿರೂಪವಂನು ಪ್ರಸಿದ್ಧಿ ಮಾಡಿ, ಅವನಂನು ತಿರಿಗಿ ಸಿಂಹಾಸನದ ಮೇಲೆ ಸ್ಥಾಪಿಸ ನಿರ್ಣಯಿಸಿದರು.

## ೨ ನೇ ಚಾರ್ಲ್ಸ್ (Charles II.)

### (೧೬೬೦ — ೧೬೮೫)

ಪ್ರ. ಚಾರ್ಲ್ಸೆಂಬವನು ಯಾವ ದಿನದಲ್ಲಿ ಲೋಂಡನ್ ಪಟ್ಣದವರಿಂದ ರಾಯನಾಗಿ ಅಂಗೀಕರಿಸಲ್ಪಟ್ಟನು?

ಉ. ತನಗೆ ಒಡ್ಡಂತಿಯಾದ ಮೇ ತಿಂಗಳ ೨೯ ನೇ ತಾರೀಖಿನಲ್ಲಿಯೂ, ೧೬೬೦ ನೇ ಸಂವತ್ಸರದಲ್ಲಿಯೂ, ರಾಯನಾಗಿ ಅಂಗೀಕರಿಸಲ್ಪಟ್ಟನು.

ಪ್ರ. ಚಾರ್ಲ್ಸ್ ರಾಯನ ರಾಜ್ಯಭಾರದಲ್ಲಿ ಆದಂಥ ಪ್ರಧಾನ ಸಂಗತಿ ಯಾವದು?

ಉ. ಇವನು ದಚ್ ಜನರೊಂದಿಗೆ ಜಗಳ ಮಾಡಿದ್ದರಿಂದ ಅಮೇರಿಕದಲ್ಲಿರುವ ನ್ಯೂಯೋರ್ಕ್ (New York) ಎಂಬ ಪಟ್ಣವಂನು ಪಡೆದನು; ಆದರೆ ಸಮುದ್ರದ ಮೇಲೆ ಆದಂಥಾ ಯುದ್ಧಗಳಲ್ಲಿ ನಷ್ಟ ಪಟ್ಟನು.

ಪ್ರ. ಇಂನು ಆ ರಾಜ್ಯಭಾರದಲ್ಲಿ ಗುರಿಸತಕ್ಕ ವೃತ್ತಾಂತಗಳೇನು?

ಉ. ಕೆಲ ದುಷ್ಟ ಜನರು ಒಳಸಂಚು ಮಾಡಿದರು;

ಮತ್ತು- ಈ ಸಂಚುಗಳ ತಪೆಲ್ಲವಂನು ಪ್ರೋತೆಸ್ತಾಂತರು
ಕಥೋಲಿಕರ ಮೇಲೆ ಹೊರಿಸುವರು.

ಪ್ರ. ಆ ಫಿತೂರಿಗಳೊಳಗೆ ಮೊದಲನೇದು ಯಾ
ವದು?

ಉ. ತೈತಸ್ ಓತ್ಸ್ (Titus Oates) ಎಂಬವನು
ಮಾಡಿದ ಫಿತೂರಿಯೇ. ಆ ಮನುಷ್ಯನು ಕಾಸು ಇಲ್ಲ
ದವನಾಗಿಯೂ ಅನೇಕ ಪಾತಕಗಳಂನು ಕಟ್ಟಿಕೊಂಡವನಾ
ಗಿಯೂ ಇದ್ದನು. ಇವನು ರಾಯನಿಗೆ ಚಾಡಿ ಹೇಳಿದ್ದೇ
ನಂದರೆ: "ಜೇಸ್ವಿತ್ (Jesuits) ಸನ್ಯಾಸಿಗಳು ಪಾಪು ಸ್ವಾ
ಮಿಯವರ ಕಟ್ಟಳೆಗೆ ಅನುಸಾರವಾಗಿ ನಿಂಮಂನು ಕೊಲ್ಲಿಸಿ,
ನಿಮಗೆ ಬದಲಾಗಿ ನಿಂಮ ತಂಮನಾದ ಜೇಂಸೆಂಬ ಯೋ
ರ್ಕ್ ಪಾಳ್ಯಗಾರನಂನು ಸಿಂಹಾಸನದ ಮೇಲೆ ಸ್ಥಾಪಿಸುವ
ಹಾಗೆ ಒಳಸಂಚು ಮಾಡಿದ್ಧಾರೆ; ಅಂಥಾ ದ್ರೋಹಕ್ಕೆ ಜೇಂ
ಸನ ಕರ್ಣೀಕನಾದ ಕೋಲ್ಮನ್ (Coleman) ಧೊರೆಯೂ
ಇಂನು ಬೇರೆ ಧೊರೆಗಳೂ ಸಂಮತಿಸಿದ್ಧಾರೆ," ಎಂಬ
ಚಾಡಿ ಹೇಳಿದನು. ಮತ್ತು ಪ್ರೋತೆಸ್ತಾಂತರ ಸಂದಣಿಯು
ಈ ಕಥೆಯಂನು ನಿಜವೆಂದು ಸಾಧಿಸಿತು.

ಪ್ರ. ಇಂಥಾ ವೈರಾಗ್ಯವು ಹುಟ್ಟುವದಕ್ಕೆ ಯಾವ
ದೊಂದು ಕಾರಣವಾಯಿತೋ?

ಉ. ಹೌದು; ಓತೆಂಬವನ ಫಿರ್ಯಾದಿಯಂನು ಅಂ
ಗೀಕರಿಸಿದಂಥಾ ಸರ್ ಗೊಡ್ಫ್ರೀ (Godfrey) ಎಂಬವನು
ಒಂದು ಹಳ್ಳದಲ್ಲಿ ಸತ್ತವನಾಗಿ ದೊರಕಿದದರಿಂದ, ಕಥೋ

ಲಿಕರ ಮೇಲೆ ಪ್ರೋತೆಸ್ತಾಂತರು ಈ ಕೊಲೆಯನ್ನು ಹೊರಿಸಿದರು. ಆದರೆ ಇದು ಅಬದ್ಧವೆಂದು ಸುಲಭವಾಗಿ ಮೆಪ್ಪಿಸಬಹುದು. ಇವನು ಯಾವಾಗಲೂ ಕಥೋಲಿಕರಿಗೆ ಸ್ನೇಹಿತನಾಗಿದ್ದದ್ದಲ್ಲದೆ, ಓತ್ಸೆಂಬವನ ಫಿರ್ಯಾದಿಯ ನಿಮಿತ್ತವಾಗಿ ಜನರು ಹುಚ್ಚುಕೋಪ ಮಾಡ್ಯಾರೆಂಬದಾಗಿಯೂ ಎಚ್ಚರಿಕೆಯಾಗಿರ ಬೇಕೆಂಬದಾಗಿಯೂ ಅನೇಕ ಮಂದಿ ಕಥೋಲಿಕರಿಗೆ ತಿಳಿಸಿಯಿದ್ದನು. ಹೀಗಿದ್ದು ಕಥೋಲಿಕರು ಇವನನ್ನು ಕೊಂಧಾಕಿದ್ಧಾರೆಂಧೇಳ ಕೂಡದು. ಇವನು ತಂನ ತಂದೆಯ ಹಾಗೆ ಪೈತ್ಯದ ಒಂದು ಭ್ರಮೆಯಲ್ಲಿ ತಂನ ಪ್ರಾಣವಂನು ತಾನೇ ತೆಗದುಕೊಂಡನೆಂದು ಊಹಿಸ ಬಹುದು.

ಪ್ರ. ಆಗ ಪಾರ್ಲಮೆಂತಿನವರು ಏನು ಮಾಡಿದರು ?

ಉ. ಅವರು ಪ್ರಜೆಗಳ ರೋಷವಂನು ರೇಗಿಸಿದ್ದಲ್ಲದೆ, ಓತ್ಸೆಂಬ ಚಾಡಿಕಾರನನ್ನು ರಾಯನ ಹತ್ರಕ್ಕೆ ಸ್ತುತಿಸಿ, ಅವನಿಗೆ ೧೨೦೦ ಪೌಂಡ್ (೧೨,೦೦೦ ರೂ.) ಸಂಬಳವನ್ನು ಕೊಡಿಸಿದರು.

ಪ್ರ. ಇವನಿಗೆ ಅಷ್ಟು ಬಹುಮಾನ ಮಾಡಿದ್ದಕ್ಕೆ ಏನು ಫಲವಾಯಿತು ?

ಉ. ಪ್ರಸಿದ್ಧಿಯಾದ ಕಳ್ಳನಾಗಿದ್ದ ವಿಲ್ಯಂ ಬೆದ್ಲೋ (Bedloe) ಎಂಬವನು ಕಥೋಲಿಕರ ಮೇಲೆಯೂ ರಾಯನ ಸತಿಯಾದ ಕಥೆರಿನ್ ದೆ ಬ್ರಗಾನ್ಸ (Catherine de Braganza) ಎಂಬವಳ ಮೇಲೆಯೂ ಇಲ್ಲದಂಥಾ ತಪ್ಪುಗ

ಳಂನು ಹೊರಿಸಿದನು. ಆದರೆ ಪಾರ್ಲಮೆಂಟಿನವರು ಆ ಫಿರ್ಯಾದಿಯನ್ನು ಮಂಜೂರು ಮಾಡಿದ್ದಾಗ್ಯೂ, ರಾಯನು ಅದನ್ನು ಸಡ್ಡೆಮಾಡಲಿಲ್ಲಾ.

ಪ್ರ. ಸದರಹಿ ದೂಷಕರ ಫಿತೂರಿಯಿಂದ ಎಷ್ಟು ಮಂದಿ ಪ್ರಾಣ ಹೋಗಲಾಡಿಸಿದರು ?

ಉ. ಅನೇಕರೇ; ಅವರೊಳಗೆ ಯೋರ್ಕ್ ಪ್ರಧಾನಿಯ ಕರ್ಣೀಕನಾದ ಕೋರ್ಲ್ಮ ಎಂಬವನು. ಇವನು ಕಡೇ ಪರಿಯಂತ್ರ ತಾನು ನಿರಪರಾಧಸ್ಥನೆಂದು ಸಾಧಿಸಿ ಹೇಳಿದನು. ಇವನಾದ ಬಳಿಕ, ಪಿಕರಿಂಗ್ (Pickering), ಐರ್ಲಾಂಡ್ (Ireland), ಗ್ರೋವ್ (Grove) ಎಂಬ ೩ ಜೇಸ್ವಿತರು; ಇವರು ಜೇಸ್ವಿತ್ ಸಭೆಯ ಸನ್ಯಾಸಿಗಳಾಗಿದ್ದದರಿಂದ ಮಾತ್ರವೇ ಪ್ರೋತೆಸ್ತಾಂತರು ಅವರಂನು ಕೊಲ್ಲಿಸಿದರೆಂದು ಸಮಸ್ತ ಗ್ರಂಥಕರ್ತರು ಹೇಳುತ್ತಾರೆ.

ಪ್ರ. ಇಂನು ಆ ಹಿಂಸೆಯಲ್ಲಿ ಪಟ್ಟವರ್ಯಾರು ?

ಉ. ೭೦ ಪ್ರಾಯದವನಾದ ಮಹಾ ದೊಡ್ಡ ವಂಶವುಳ್ಳ ಸ್ಟಫೊರ್ಡ್ (Stafford) ಧೊರೆಯೇ. ಇವನಿಗೋಸ್ಕರ ಸಾಕ್ಷಿ ಕೊಡುವಂಥವರಂನು ಹತ ಮಾಡುವಬಗ್ಯೆ ಪ್ರೋತೆಸ್ತಾಂತರು ಹೊಂಚಿ ನೋಡುತ್ತಾ ಇದ್ದರು. ಮತ್ತು ಆ ಧೊರೆಯು ಸಾವಿಗೆ ನೇಮಿಸಲ್ಪಟ್ಟಾಗ, ಇವನನ್ನು ಗಲ್ಲಿಗೆ ಹಾಕಿ ತುಂಡಾಗಿ ಕಡಿಯ ಬೇಕೆಂದು ಇವನ ಶತೃಗಳು ಹೇಳುತ್ತಾ ಇದ್ದರು. ಆದರೆ ರಾಯನು ಅವನಿಗೆ ತಲೆ ಕಡಿಯ ನಿರ್ಣಯಿಸಿದನು. ಕಡೆಯಲ್ಲಿ, ಐರಿಷ್ (Irish) ಜಾತಿ

ಯವರಾಗಿಯೂ ಕಥೋಲಿಕ್ ಮೇತ್ರಾಣಿಗಳಾಗಿಯೂ ಇದ್ದ ಒಲಿವೆರ್ ಪ್ಲಂಕೆಟ್ (Plunkett) ಎಂಬವರು ಸಹಾ ಕೊಲೆ ಮಾಡಲ್ಪಟ್ಟರು.

ಪ್ರ. ಆ ಕಾಲದಲ್ಲಿ ಮಾಡಲ್ಪಟ್ಟ ಪ್ರಧಾನ ನಿಬಂಧನೆಯು ಯಾವದು ?

ಉ. ಹೆಬಿಯಾಸ್ ಕೋರ್ಪಸ್ (Habeas Corpus) ಎಂಬ ನಿಬಂಧನೆಯೇ. ಇದಕ್ಕೆ ಅನುಸಾರವಾಗಿ ಒಬ್ಬೊಬ್ಬನು ತನ್ನ ಮೇಲೆ ತಕ್ಸೀರು ರುಜು ಮಾಡಲ್ಪಟ್ಟರೇ ಹೊರ್ತು, ಸೆರೆಮನೆಯಲ್ಲಿ ಹಾಕಲ್ಪಡ ಕೂಡದು.

ಪ್ರ. ಈ ರಾಜ್ಯಭಾರದ ಬೇರೆ ಫಿತೂರಿಗಳು ಯಾವವು ?

ಉ. ಡೇಂಜೆಫೀಲ್ಡ್ (Dangerfield) ಎಂಬ ಒಬ್ಬ ದುಷ್ಟನು ಒಂದು ಹೊಸ ಫಿತೂರಿ ಮಾಡಿದನು. ಆ ಉಪಾಯಗಳೆಲ್ಲಾ ನಿರಪರಾಧಸ್ತರಾದ ಕಥೋಲಿಕರಂನು ಕೆಡಿಸುವ ಹಾಗೆ ಕಾಪಿಸಲ್ಪಟ್ಟದ್ದೇ ವಿನಾ, ಇತರವಲ್ಲವೆಂದು ವಿವೇಕಸ್ತರಾದ ಗ್ರಂಥಕರ್ತರು ಒಪ್ಪಿಕೊಳ್ಳುತ್ತಾರೆ.

ಪ್ರ. ರಾಯನ ಸಹೋದರನಿಗೆ ವಿರೋಧವಾಗಿ ಯಾವದೊಂದು ಪ್ರಯತ್ನ ಮಾಡಲ್ಪಟ್ಟಿತೋ ?

ಉ. ಹೌದು; ಅವನು ಕಥೋಲಿಕನಾಗಿದ್ದ ನಿಮಿತ್ತ, ಅವನು ಎಂದಿಗಾದರೂ ಸಿಂಹಾಸನ ಏರದಂತೆ ಷಫ್ಟ್ಸ್‌ಬರಿ (Shaftesbury) ಎಂಬ ಧೊರೆಯೂ ಬೇರೆ ಪ್ರೊತೆಸ್ತಾಂತರೂ ಒಂದು ನಿಬಂಧನೆ ಮಾಡಿಸ ಪ್ರಯತ್ನಿಸಿದರು.

ಆದರೆ ಪ್ರಜೆಗಳ ಮುಖ್ಯಪಾಲು ಅದಕ್ಕೆ ಒಪ್ಪಿಕೊಳ್ಳಲಿಲ್ಲ.

ಪ್ರ. ಪಾರ್ಲಮೆಂತಿನವರು ಕಥೋಲಿಕ್ ವೇದಸ್ತರಿಂದ ಒಂದು ಅನ್ಯಾಯವಾದ ಸತ್ಯ ಪ್ರಮಾಣ ಕೇಳಲಿಲ್ಲವೋ?

ಉ. ಹೌದು. ಅವರು ಕಟ್ಟಳೆ ಮಾಡಿದ್ದೇನೆಂದರೆ: "ಸರ್ಕಾರದಲ್ಲಿಯಾದರೂ ದಂಡಿನಲ್ಲಿಯಾದರೂ ಒಂದು ಉದ್ಯೋಗ ಹೊಂದ ಬೇಕಾದರೆ, ಉದ್ಯೋಗವ ಹೋರುವವನು ರಾಯನ ಜ್ಞಾನ ಅಧಿಕಾರಪರನ್ನು ಅಂಗೀಕರಿಸುತ್ತೇನೆಂತಲೂ ಅಂಗ್ಲಿಕಾನ ಮತದ ರೀತಿಗೆ ಅನುಸಾರವಾಗಿ ಸತ್ ಪ್ರಸಾದ ತೆಕ್ಕೊಳ್ಳುವೆನೆಂತಲೂ ಸತ್ಯಪ್ರಮಾಣ ಮಾಡಬೇಕೆಂದು," ಕಟ್ಟಳೆ ಮಾಡಿದರು.

ಪ್ರ. ಆ ಕಟ್ಟಳೆಯಿಂದ ಏನಾಯಿತು?

ಉ. ಅನೇಕ ಕಥೋಲಿಕ್ ಧೊರೆಗಳು ಅಂಥಾ ಸತ್ಯ ಪ್ರಮಾಣವಂನು ಪಾಪವಿಲ್ಲದೆ ಮಾಡ ಕೂಡದೆಂದು ತಿಳಿದು, ಸರ್ಕಾರದಲ್ಲಿ ತಮಗೆ ಇದ್ದ ಉದ್ಯೋಗಗಳಿಗೆ ರಾಜೀನಾಮೆ ಕೊಟ್ಟರು.

ಪ್ರ. ಆ ಕಾಲದಲ್ಲಿ ಚಾರ್ಲ್ಸ ರಾಯನು ಪಾರ್ಲಮೆಂತ್ ಸಭೆಯಂನು ಬರತರಪು ಮಾಡಲಿಲ್ಲವೋ?

ಉ. ಹೌದು; ಪಾರ್ಲಮೆಂತ್ ಸಭೆಯವರು ಮೇಲೆ ಹೇಳಿದ ಫಿರ್ಯಾದಿಗಳಲ್ಲಿ ಅನೇಕ ಅಬದ್ಧ ಸಾಕ್ಷಿಗಳಂನು ನುಡಿಸಿದ್ದರಿಂದ, ಧೊರೆಗಳು ಅದಕ್ಕೆ ಜವಾಬು ಕೇಳಲಾಗಿ, ದೊಡ್ಡ ತರ್ಕ ಉಂಟಾಯಿತು; ಮತ್ತು ರಾಯನು ಪಾರ್ಲಮೆಂತವರಂನು ಹೊರಾರಡಿಸಿದನು.

ಪ್ರ. ಇದರಿಂದ ಯಾವದೊಂದು ಹೊಸ ಸಂಚು ಆಯಿತೋ ?

ಉ. ಹೌದು; ಚಾರ್ಲ್ಸ ರಾಯನನ್ನೂ ಇವನ ಸಹೋದರನನ್ನೂ ಸಂಹರಿಸಿ ಇನ್ನೊಂದು ದೌಲತ್ತು ಸ್ಥಾಪಿಸ ಬೇಕೆಂದು ರಾಯನ ಇಬ್ಬಂದಿ ಮಗನಾದ ಮೊರ್ನ ಮಥ್ (Monmouth) ಎಂಬವನೂ, ವಿಲ್ಯಂ ರಸ್ಸೆಲ್ (Russell) ಎಂಬವನೂ, ಹಾವರ್ಡ್ ಎಂಬವನೂ, ಸಿದ್ನೀ (Sidney) ಎಂಬವನೂ ಹಂಪ್ಡೆನ್ ಎಂಬವನೂ, ಸಂಚು ಮಾಡಿ ಇದ್ದರು. ಅವರು ಗೋಧಿಮನೆ (ರೈಹೌಸ್) (Ryehouse) ಎನ್ನಲ್ಪಟ್ಟ ಒಂದು ಗ್ರಾಮದ ಗೃಹದಲ್ಲಿ ಕೂಟ ಮಾಡಿದ್ದರಿಂದ, ಇಂಥಾ ಸಂಚಿಗೆ ರೈಹೌಸೆಂಬ ಹೆಸರಾಯಿತು.

ಪ್ರ. ಅದು ನೆರವೇರಿತೋ ?

ಉ. ಇಲ್ಲ. ಚಿಲ್ಲರ ಜನರುಗಳೊಳಗೆ ಕೆಲಬರು ದ್ರೋಹ ಮಾಡಿ ಧೊರೆಗಳ ಮೇಲೆ ಫಿರ್ಯಾದಿ ಮಾಡಿದ್ದರಿಂದ, ಸಿದ್ನೀ, ರಸ್ಸೆಲ್, ಜೆಫ್ರೀಸ್ (Jeffreys), ಮತ್ತು ಬೇರೆ ಕೆಲಬರು ಸಾವಿಗೆ ನಿರ್ಣಯಿಸಲ್ಪಟ್ಟರು. ಹಾವರ್ಡ್ ಧೊರೆಯು ಮಿತ್ರರ ಮೇಲೆ ಸಾಕ್ಷಿ ಕೊಟ್ಟನು; ರಾಯನ ಕುಮಾರನಾದ ಮೊನ್ಮಥೆಂಬವನು ಮಾಫು ಹೊಂದಿ ದೇಶಾಂತ್ರವಾಗಿ ತಳ್ಳಲ್ಪಟ್ಟನು.

ಪ್ರ. ಚಾರ್ಲ್ಸ ರಾಯನು ಹ್ಯಾಗೆ ಸತ್ತನು ?

ಉ. ಅವನು ಘನವಾದ ವ್ಯಾಧಿಯಲ್ಲಿ ಬಿದ್ದಾಗ,

ಇವನ ತಂಮನಾದ ಜೇಂಸೆಂಬವನು ಒಬ್ಬ ಕಥೋಲಿಕ್ ಗುರುಗಳಂನು ಅವನ ಬಳಿಗೆ ಶೇರಿಸಿದ್ದರಿಂದ, ಚಾರ್ಲ್ಸೆಂಬವನು ಪತಿತನವಂನು ವಿಸರ್ಜಿಸಿ, ತಿರು ಸಭೆಯ ದೇವ ದ್ರವ್ಯ ಅನುಮಾನಗಳಂನು ರಹಸ್ಯವಾಗಿ ಪರಿಗ್ರಹಿಸಿ ಸತ್ತನು. ಇವನ ಗುಣವು ಕಪಟವೂ ಪೋಕರಿಯೂ ಆಗಿದ್ದಾಗ್ಯೂ, ತಂನ ದಯದ ನಿಮಿತ್ತ ಅನೇಕರಿಂದ ಸ್ನೇಹಿಸಲ್ಪಡುತ್ತಿದ್ದನು. ಇವನು ೫೫ ಪ್ರಾಯದವನಾಗಿ ಸತ್ತನು. (೧೬೮೫.)

## ೨ ನೇ ಜೇಂಸ್ (James II.) (೧೬೮೫—೧೬೮೮)

ಪ್ರ. ಚಾರ್ಲ್ಸೆಂಬವನಿಗೆ ಬದಲಾದವನ್ಯಾರು ?

ಉ. ಇವನ ತಮ್ಮನಾದ ಯೋರ್ಕ್ ಪಾಳ್ಯಗಾರನೇ; ಈತನಿಗೆ ೨ ನೇ ಜೇಂಸೆಂಬ ಹೆಸರಾಯಿತು.

ಪ್ರ. ಈತನ ರಾಜ್ಯಭಾರದಲ್ಲಿ ಆದಂಥಾ ಮೊದಲನೇ ಕಲಹ ಯಾವದು ?

ಉ. ಮುಂಚೆ ಮಾಫು ಹೊಂದಿದಂಥಾ ಮೊನ್ಮಥ್ ಎಂಬವನು ಇಂಗ್ಲಾಂಡ್ ಸೀಮೆಗೆ ತಿರಿಗಿ ಬಂದು, ದಂಡೆತ್ತಿ, ರಾಜಕಿರೀಟಕ್ಕೆ ದಾವೆ ಮಾಡಿದನು.

ಪ್ರ. ಆಗ ಏನು ಸಂಭವಿಸಿತು ?

ಉ. ಮೊನ್ಮಥೆಂಬವನ ದಂಡು ರಾಯನ ದಂಡಿನಿಂದ ಮುರಿಯಲ್ಪಡಲು, ಅವನು ಸಹಾ ಕೊಂಚದರೊ

ళగె హిడియల్పట్టను. ౨ నే సారి ఇవను మాఫు కేళిదను, ఆదరె రాయను అవన మనవి అంగీకరిసదె అవనిగె తలె హొయిసిదను.

ప్ర. జేంసెంబ రాయను యావ కారణదింద ప్రోతెస్తాంతర రోషవన్ను ఎబ్బిసిదను ?

ఉ. కథోలికర మేలెయూ దిస్సెంతెర్ (Dissenter) పక్షితర మేలెయూ ఇద్ద అన్యాయవాద కట్టళెగళంను మురిసి, వేదద విషయదల్లి ఎల్లరిగె స్వస్వతంత్రవన్ను కొట్టదరింద, తంమ మతద మేలె భ్రాంతియాగియూ కథోలికర మేలె వైరిగళాగియూ ఇద్ద ప్రోతెస్తాంతరు రాయన మేలె తిరుగబిద్దరు.

ప్ర. జేంసెంబ రాయను అవర మూర్ఖతనవన్ను నోడి హింతెగిదనో ?

ఉ. ఇల్ల. ఎల్లరిగె మనసాక్షియ స్వతంత్రవంను ఆదరిసువంథా తంన హుకుం ౨ నే సారి ప్రసిద్ధమాడి, సమస్త దేవస్థానగళల్లి ఓదల్పడువంతె అజ్ఞాపిసిదను. ఆదరె వెస్త్మిన్స్తెర్ అతిమేత్రాణియూ ఇన్ను బేరె కెల ప్రోతెస్తాంత్ మేత్రాణిగళూ ఈ కట్టళెయంను నెరవేరిసదె అవిధేయస్తరాదరు.

ప్ర. ఆగ రాయను అవరిగె ఏను మాడిదను ?

ఉ. అవరన్ను శెరెమనెయల్లి ఇక్కిసి, కచ్చేరియల్లి

ಅವರ ನಡತೆಯನ್ನು ನಿರ್ಣಯಿಸ ಮಾಡಿದನು. ಆದರೆ ನ್ಯಾಯಸ್ಥರು ಅವರ ಮೇಲೆ ತಪ್ಪುಯಿಲ್ಲವೆಂದು ತೀರ್ಪು ಮಾಡಿದ್ದಲ್ಲದೆ, ಠಾಣುವೆಯವರೆಲ್ಲರು ಅಂಥ ತೀರ್ವೆಯ ಮೇಲೆ ಉಲ್ಲಾಸದ ಆರ್ಭಟ ಮಾಡಿದರು.

ಪ್ರ. ಇಂಥಾ ಕಲಹಗಳು ನಡೆಯುವಾಗ, ರಾಯನಿಗೆ ವಿರೋಧವಾಗಿ ಎದ್ದವನ್ಯಾರು ?

ಉ. ಇವನ ಅಳಿಯನಾಗಿಯೂ ಹಾಲಾಂಡ್ ದೇಶದ ಧೊರೆಯಾಗಿಯೂ ಇದ್ದ ವಿಲ್ಯಂ ಎಂಬ ಪ್ರಧಾನಿಯೇ. ಅವನು ತಂನ ಹೆಂಡತಿಯಾದ ಮೇರಿ ಎಂಬವಳ ಹೆಸರಿನಲ್ಲಿ ರಾಜ್ಯವಂನು ಕೇಳುವದಲ್ಲದೆ, ಜೇಂಸೆಂಬವನು ಕಥೋಲಿಕನಾದದ್ದರಿಂದ ಇಂಗ್ಲಿಷ್ ಸಿಂಹಾಸನಕ್ಕೆ ತಕ್ಕವನಲ್ಲವೆಂದು ಸಾಧಿಸಿ, ಜಗಳಕ್ಕೆ ರಹಸ್ಯವಾದ ಪ್ರಯತ್ನಗಳನ್ನು ಮಾಡಿದನು.

ಪ್ರ. ಅಷ್ಟರಲ್ಲಿ ಜೇಂಸೆಂಬ ರಾಯನು ಸುಂಮನೆ ಇದ್ದನೋ ?

ಉ. ಹೌದು. ಸಂದೆರ್ಲಾಂಡ್ (Sunderland) ಎಂಬ ತಂನ ದ್ರೋಹಿಯಾದ ಮಂತ್ರಿಯಂನೂ ತಂನ ದಂಡಿನವರ ಪ್ರಮಾಣಿಕವನ್ನೂ ನಂಬಿಕೊಂಡು ನಿರ್ಭೀತಿಯಾಗಿದ್ದನು. ಆದದರಿಂದ ೧೪ ನೇ ಲುವಿಸೆಂಬ ಫ್ರೆಂಚ್ ರಾಯನು ಅವನಂನು ರಹಸ್ಯವಾಗಿ ಎಚ್ಚರಿಸಿದಾಗ್ಯೂ, ಮತ್ತು ಬರುವ ಮೋಸದೊಳಗಿಂದ ಅವನನ್ನು ತಪ್ಪಿಸುವದಕ್ಕೆ ಹಡಗಗಳಂನೂ ದಂಡನ್ನೂ ಒಪ್ಪಿಸಿದಾಗ್ಯೂ, ನಿಭಾ

ಗ್ರಸ್ತನಾದ ಆ ರಾಯನು ಏನೂ ಕೇಳಲೊಲ್ಲದೆ ಇದ್ದನು.

ಪ್ರ. ಕಡೆಯಲ್ಲಿ ವಿಲ್ಯಂ ಎಂಬ ಪ್ರಧಾನಿಯು ಏನು ಮಾಡಿದನು ?

ಉ. ತಂನ ಹಡಗುಗಳನ್ನು ಕೂಡಿಸಿ, ಮೊದಲು ಫ್ರಾನ್ಸ್ ಸೀಮೆಗೆ ಬರುವದಾಗಿ ತೋರಿಸಿ ಕೊಂಡನು; ಆದರೆ ಆಕಸ್ಮಿಕವಾಗಿ ತಂನ ಪ್ರಯಾಣವನ್ನು ಬದಲಾಯಿಸಿ, ಇಂಗ್ಲಾಂಡ್ ದೇಶಕ್ಕೆ ತಂನ ಹಡಗುಗಳಂನು ತಿರಿಗಿಸಿದನು. ಮತ್ತು ದೆವೊನ್ಷಿರ್ (Devonshire) ತಾಲೂಕಿಗೆ ಸೇರಿದ ತೋರ್ಬೇ (Torbay) ಎಂಬ ರೇವಿನಲ್ಲಿ ತಂನ ದಂಡಂನು ಇಳಿಸಿದನು.

ಪ್ರ. ಮೊದಲು ಜನರು ಬಹು ಸಂತೋಷದೊಂದಿಗೆ ಅವನನ್ನು ಅಂಗೀಕರಿಸಿದರೋ ?

ಉ. ಇಲ್ಲ; ಎಗ್ಸೆತೆರ್ ಪಟ್ಟಣವನ್ನು ಪ್ರವೇಶಿಸಿದಾಗ, ವಾಸಿಗಳೂ ಗುರುಗಳೂ ಸಹ ಓಡಿ ಹೋದದ್ದರಿಂದ, ಬೀದಿಗಳು ಖಾಲಿಯಾದವು. ಆದರೆ ಕೊಂಚದರಲ್ಲಿ, ಚರ್ಚಿಲ್ (Churchill) ಎಂಬ ಧೊರೆಯು, ಮತ್ತು ಕೊರ್ನ್ಬರಿ (Cornbury) ಪ್ರಭುಗಳ ಫಿತೂರಿಯಿಂದ ಜೇಂಸೆಂಬ ರಾಯನ ದಂಡಿನವರು ಇವನಂನು ಕೈಬಿಟ್ಟು, ವಿಲ್ಯಂ ಪ್ರಧಾನಿಯ ಕಡೆಗೆ ಸೇರಿದರು. ರಾಯನ ಮಗಳಾಗಿಯೂ ಡೇನ್ಮಾರ್ಕ್ ಪ್ರಧಾನಿಯ ಸತಿಯಾಗಿಯೂ ಇದ್ದ ಅನ್ನ ಎಂಬವಳು ಮೊದಲಾಗಿ ತಂನ ತಂದೆಯನ್ನು ವಿಸರ್ಜಿಸಿ, ದಬರ ಪಾರ್ಶ್ವದವಳಾದಳು.

ಪ್ರ. ವಿಲ್ಯಂ ಎಂಬವನು ತನ್ನ ಮಾವನಿಗೆ ಏನು ಮಾಡಿದನು ?

ಉ. ಅವನನ್ನು ಹಿಡಿಯುವದಕ್ಕೆ ಒಂದು ತುಕ್ಕಡಿಯನ್ನು ಕಳುಹಿಸಿದನು. ರಾಯನು ತಂನ ಸ್ವಂತ ಕಾವಲರ ಒತ್ತಾಸೆಯಿಂದ ಎದುರಿಸ ಬಹುದಾಗಿದ್ದರೂ, ವ್ಯರ್ಥವಾದ ಪ್ರಾಣಗಳ ನಷ್ಟ ಮಾಡಿಸ ಬಾರದೆಂಥೇಳಿ, ಜಗಳವಿಲ್ಲದೆ ತಂನನ್ನು ಒಪ್ಪಿಸಿಕೊಟ್ಟನು. ಆದ್ದರಿಂದ ಭಟರು ಅವನನ್ನು ಲೊಂಡನ್ ಪಟ್ಣದ ಆಚೆ ಕರಕೊಂಡ್ಹೋಗಿ, ರೊಚೆಸ್ಟರ್ (Rochester) ಎಂಬ ಕೋಟೆಯಲ್ಲಿ ಮುಚ್ಚಿದರು. ಅಷ್ಟರಲ್ಲಿ ಫ್ರೆಂಚ್ ರಾಯನಿಂದ ಕಳುಹಿಸಲ್ಪಟ್ಟ ಲೋಸನ್ (Lauzun) ಎಂಬ ಒಬ್ಬ ಧೊರೆಯು ಜೇಂಸೆಂಬವನ ಸತಿಯನ್ನೂ ಕುಮಾರನನ್ನೂ ತಪ್ಪಿಸ ಮಾಡಿ, ಹಡಗಿನ ಮೇಲೆ ಏರಿಸಿ, ಫ್ರಾನ್ಸ್ ಸೀಮೆಗೆ ಸುರಕ್ಷಿತವಾಗಿ ಕರಕೊಂಡ್ಹೋದನು.

ಪ್ರ. ಜೇಂಸೆಂಬ ರಾಯನಿಗೆ ಏನಾಯಿತು ?

ಉ. ತಂನ ಸೆರೆಯೊಳಗಿಂದ ತಪ್ಪಿಸುವದಕ್ಕೆ ಉಪಾಯ ಮಾಡಿಕೊಂಡು, ಫ್ರಾನ್ಸ್ ದೇಶಕ್ಕೆ ಸಹಾ ಓಡಿ ಹೋದನು; ಮತ್ತು ಕೆಲವು ವರುಷ ಪರಿಯಂತ್ರ ೧೪ ನೇ ಲುವಿಸೆಂಬವನ ಬಳಿಗೆ ಬರುಮಾನವಾಗಿ ಬದುಕಿದನು. ತಿರುವಾಯು, ತಂನ ರಾಜ್ಯವಂನು ಪುನಃ ಸ್ವತಂತ್ರಿಸ ಬಹುದೆಂದು ನಂಬಿಕೊಂಡು, ಫ್ರೆಂಚ್ ರಾಯನಿಂದ ಹಡಗಗಳಂನೂ ದಂಡಂನೂ ಹೊಂದಿ, ಐರ್ಲಾಂಡ್ ಸೀಮೆಯಲ್ಲಿ ಇಳಿ

ದನು. ವಿಲ್ಯಂ ಎಂಬವನು ದಂಡು ಕೂಡಿಸಿ,ಐರ್ಲಾಂಡ್ ದೇಶಕ್ಕೆ ಹೋಗಿ, ರಾಯನನ್ನು ಬೋಯಿನ್ (Boyne) ಎಂಬ ಸ್ಥಳದಲ್ಲಿ ಜಯಿಸಿದ್ದರಿಂದ, ಈತನು ಅಪಧೈರ್ಯಪಟ್ಟು ಫ್ರಾನ್ಸ್ ಸೀಮೆಗೆ ತಿರಿಗಿ ಹೋಗಿ, ಸಾಯುವ ಮಟ್ಟಿಗೂ ರಾಯನ ಅರಮನೆಯಲ್ಲಿದ್ದನು. ಇದಲ್ಲದೆ, ಈತನ ಪಾರ್ಶ್ವದವರಾದ ೧೪,೦೦೦ ಐರಿಷ್ ದಂಡಿನವರು ಸಹಾ ಫ್ರಾನ್ಸ್ ಸೀಮೆಗೆ ಹೋಗಿ, ಆ ರಾಯನ ಸಂಬಳ ತೆಗದುಕೊಂಡು, ಅಲ್ಲಿ ನಿಂತರು. ಜೇಂಸೆಂಬ ರಾಯನು ೧,೭೦೧ ನೇ ಸಂವತ್ಸರದಲ್ಲಿ ಸತ್ತನು. ಅವನು ಈ ಲೋಕದ ನೀತಿಯನ್ನು ನೋಡದೆ, ದೇವರ ನೀತಿಗೂ ತಂನ ಮನಸಾಕ್ಷಿಗೂ ಅನುಸಾರವಾಗಿ ರಾಜ್ಯಭಾರ ಮಾಡಿದ್ದರಿಂದ, ಪತಿತರು ಅವನನ್ನು ಅಸಂಹಿಸಿ, ದ್ರೋಹಮಾಡಿ, ಕಡೆಯಲ್ಲಿ ತಂನ ಪಿತೃಗಳ ಸಿಂಹಾಸನವನ್ನು ಅವನಿಂದ ಕಿತ್ತುಕೊಂಡರು.

## ವಿಲ್ಯಂ ಮತ್ತು ಮೇರಿ ಎಂಬವಳು. (William and Mary.)

(A. D. ೧೬೮೯ — ೧೭೦೨.)

ಪ್ರ. ಜೇಂಸೆಂಬ ರಾಯನು ಇಂಗ್ಲಾಂಡ್ ಸೀಮೆಯನ್ನು ಬಿಟ್ಟ ತರುವಾಯ, ವಿಲ್ಯಂ ಎಂಬವನು ತಂನ ಅಧಿಕಾರವನ್ನು ಹ್ಯಾಗೆ ಸ್ಥಾಪಿಸಿದನು?

ಉ. ಪಾರ್ಲಮೆಂತಿನಲ್ಲಿ ತನಗೆ ಅನುಕೂಲವಾಗಿದ್ದವರಂನೂ ಲೊಂಡನ್ ಪಟ್ಟಣದ ಕೆಲ ಅಧಿಕಾರಿಗಳನ್ನೂ

ಒಂದು ಸಭೆಯಾಗಿ ಕೂಡಿಸಿ, ಅವರು ತನಗೂ ತಂನ ಹೆಂಡತಿಯಾದ ಮೇರಿಯಳಿಗೂ ಕಿರೀಟವಂನೊಪ್ಪಿಸುವ ಹಾಗೆ ಮಾಡಿದನು.

ಪ್ರ. ಇಂಗ್ಲಿಷ್ ಪ್ರಜೆಗಳೆಲ್ಲರು ಇವನನ್ನು ರಾಯನೆಂದು ಅಂಗೀಕರಿಸಿದರೋ ?

ಉ. ವಿಲ್ಯಂ ಎಂಬವನು ಪ್ರಜೆಗಳ ಅನುಮತಿಯು ತನಗೆ ವಿರೋಧವಾಗಿದ್ದೀತೆಂದು ತಿಳಿದು, ಅದನ್ನು ಕೇಳಲಿಲ್ಲಾ. ಆದರೆ ತಂನಂನು ರಾಯನಾಗಿ ನೇಮಿಸಿದಂಥಾ ವರಂನು ತಾನು ಪ್ರತಿಯಾಗಿ, ಅಧಿಕಾರವಿಲ್ಲದೆ, ಪಾರ್ಲಮೆಂತ್ ಸಭೆಯಸ್ತರೆಂದು ನೇಮಿಸಿದನು.

ಪ್ರ. ಸ್ಕೊತ್ ದೇಶಸ್ತರು ಹರಕತ್ತು ಇಲ್ಲದೆ ವಿಲ್ಯಂ ಎಂಬವನ ಅಧಿಕಾರಕ್ಕೆ ಒಪ್ಪಿಕೊಂಡರೋ ?

ಉ. ಇಲ್ಲಾ; ದಂಡೀ (Dundee) ಎಂಬ ಧೊರೆಯು ಜೇಂಸ್ ರಾಯನಿಗೆ ಸಹಾಯವಾಗಿ ಜಗಳ ಮಾಡಿ, ಜಯಹೊಂದುವ ವೇಳೆಯಲ್ಲಿ ಕೊಲ್ಲಲ್ಪಟ್ಟನು. ಆದ್ದರಿಂದ ಇವನ ಪೌರುಸವೆಲ್ಲಾ ವ್ಯರ್ಥವಾಯಿತು.

ಪ್ರ. ಆ ಕಾಲದಲ್ಲಿ ವಿಲ್ಯಂ ಎಂಬವನು ಸ್ಕೊತ್ಲಾಂಡಿನಲ್ಲಿ ಬಹು ಕ್ರೂರವಾದ ಒಂದು ಸಂಹಾರವಂನು ಮಾಡಿಸಲಿಲ್ಲವೋ ?

ಉ. ಹೌದು. ಜೇಂಸ್ ರಾಯನ ಪಾರ್ಶ್ವದಲ್ಲಿದ್ದ ಬೆಟ್ಟಗಳ ನಿವಾಸಿಗಳು, ನೇಮಿಸಿದ ಒಂದು ದಿನದಲ್ಲಿ, ಹೊಸ ರಾಯನಿಗೆ ಸತ್ಯ ಪ್ರಮಾಣ ಮಾಡುವ ಹಾಗೆ ಒಬ್ಬ ಸರ

ದಾರನ ಮುಂದೆ ಕರೆಯಲ್ಪಟ್ಟರು. ಗೋತ್ರದವರೆಲ್ಲರು ಬಂದು ಸತ್ಯ ಪ್ರಮಾಣ ಮಾಡಿ ಹೋದ ತರುವಾಯ, ಅಗತ್ಯವಾದ ನಿಮಿತ್ತದಿಂದ ನಿಲ್ಲಿಸಲ್ಪಟ್ಟಂಥಾ ಗ್ಲೆಂಕೋ (Glencoe) ಎಂಬ ಗೋತ್ರದ ಗೌಡನು ನಿಧಾನವಾಗಿ ಬಂದು ಸತ್ಯ ಪ್ರಮಾಣವನ್ನು ಸಹಾ ಮಾಡಿ, ತನ್ನ ಸ್ಥಳಕ್ಕೆ ಹೋದನು; ಆದರೆ ಆ ದಿನದ ತಾಮಸ ಮಾಡಿದ್ದರಿಂದ ಇವನನ್ನೂ ಇವನ ಗೋತ್ರವೆಲ್ಲವನ್ನೂ ನಿರ್ಮೂಲ ಮಾಡುವಹಾಗೆ ವಿಲ್ಯಂ ರಾಯನು ಕಟ್ಟಳೆ ಮಾಡಿದನು. ಅದಕ್ಕೆ ಅನುಸಾರವಾಗಿ ಸಿಪಾಯಿಗಳು ಅವರ ಬೆಟ್ಟಗಳಿಗೆ ಹೋಗಿ, ಅವರ ಮನೆಗಳಲ್ಲಿ ೧೫ ದಿನ ಅನ್ಯೋನ್ಯವಾಗಿ ಯಾವದೊಂದು ತೋರಿಸದೆ ಇದ್ದು ಕೊಂಡು, ಆಕಸ್ಮಿಕವಾಗಿ ಆ ಗೋತ್ರದವರ ಮೇಲೆ ಬಿದ್ದು, ಹೆಂಣು ಗಂಡು ಎಳೆ ಮುಪ್ಪು ಪ್ರಾಯ ನೋಡದೆ, ಅವರಲ್ಲಿ ೩೮ ಮಂದಿ ಸಂಹರಿಸಿದರು. (೧೬೯೧.)

ಪ್ರ. ವಿಲ್ಯಂ ಎಂಬವನ ರಾಜ್ಯಭಾರವು ಇಂಗ್ಲಾಂಡಿಗೆ ಆಪಾಯ ತಂದಿತೋ ?

ಉ. ಅಂಥಾ ದುಬಾರಿಯುಳ್ಳ ದೌಲತ್ತು ಆ ಸೀಮೆಯಲ್ಲಿ ಮುಂಚೆ ಕಾಣಿಸಲಿಲ್ಲಾ. ತಾನು ಹೇಸುತ್ತಿದ್ದ ೧೪ ನೇ ಲುವಿಸ್ ರಾಯನಿಗೆ ಜಗಳ ಮಾಡುವಹಾಗೆ, ಬಹು ಹಣ ಖರ್ಚು ಮಾಡಿ, ಕಠಿಣ ಕಂದಾಯಗಳನ್ನು ಜನರ ಮೇಲೆ ಹೊರಿಸಿದ್ದಾಗ್ಯೂ, ಯಾವದೊಂದು ಪ್ರಯೋಜನವನ್ನಾದರೂ ಹೊಂದದೆ ಇದ್ದನು.

ಪ್ರ. ಈ ರಾಯನ ಕಾಲದಲ್ಲಿ ಆದಂಥಾ ಹೊಸ ಸ್ಥಾಪನೆ ಯಾವದು ?

ಉ. ಬಾಂಕ್ (Bank) ಎಂದು ಕರೆಯಲ್ಪಟ್ಟ ಇಂಗ್ಲಿಷ್ ಸಾವುಕಾರ್. ಅದು ಹ್ಯಾಗೆಂದರೆ, ರಾಯನಿಗೆ ಋಣ ಸಾಲದೆ ಇರುವದರಲ್ಲಿ, ವರ್ತಕರ ಒಂದು ಸಭೆಯು ಅವನಿಗಾ ಇಂಗ್ಲಿಷ್ ಜನಾಂಗಕ್ಕಾ ಸಾಲವಾಗಿ ೧೨ ಕೋಟಿ ರೂಪಾಯಿ ಒಪ್ಪಿಸಿದರು. ಇಂಥಾ ಆಸಲಿನ ಚುಂಗಡಿಯು ವರುಷಾವರುಷಕ್ಕೆ ಜನಾಂಗದಿಂದ ಅಚ್ಚಲ್ಪಡುವದರಿಂದ, ಇದಕ್ಕೆ ನಷನಲ್ ಡೆಟ್ (National Debt) ಜನಾಂಗದ ಸಾಲವೆಂಬ ಹೆಸರಾಗುತ್ತೆ.

ಪ್ರ. ವಿಲ್ಯಂ ಎಂಬವನು ಸಾಯುವಾಗ, ಎಷ್ಟು ಪ್ರಾಯ ಅವನಿಗಿತ್ತು ?

ಉ. ೫೨ ಪ್ರಾಯದವನಾಗಿದ್ದನು. ಇಂಗ್ಲಾಂಡಿನಲ್ಲಿ ೧೩ ವರುಷ ಆಳಿದನು. ಇವನಿಗೆ ಸಾಮರ್ಥ್ಯವಿದ್ದಾಗ್ಯೂ, ಅವನಲ್ಲಿ ಲೇಶಮಾತ್ರವಾದರೂ ನೀತಿಯೂ ಕನಿಕರವೂ ಸತ್ಯವೂ ಇಲ್ಲದ ನಿಮಿತ್ತ, ಇವನು ಮೆಚ್ಚ ತಕ್ಕವನಲ್ಲ.

## ಅನ್ನ ಎಂಬವಳು. (Anne) (೧೭೦೨—೧೭೧೪)

ಪ್ರ. ವಿಲ್ಯಂ ಎಂಬವನಿಗೆ ಬದಲಾಗಿ ಆಳಿದವನ್ಯಾರು?

ಉ. ೨ನೇ ಜೇಂಸೆಂಬ ರಾಯನ ಕಿರಿ ಮಗಳಾಗಿ

ಯೂ ಡೆನ್ಮಾರ್ಕ್ ಪಾಳ್ಯಗಾರನಾದ ಜೋರ್ಜ್ (George) ಎಂಬವನ ಸತಿಯಾಗಿಯೂ ಇದ್ದಂಥಾ ಅನ್ನೆಂಬವಳೇ.-

ಪ್ರ. ಇವಳು ಮಾಡಿದ ಮೊದಲನೇ ಕಾರ್ಯ ಯಾವದು ?

ಉ. ಫ್ರಾನ್ಸ್ ರಾಯನಾದ ೧೪ನೇ ಲುವಿಸೆಂಬವನು ಜೇಂಸೆಂಬವನ ಕುಮಾರನನ್ನು ಇಂಗ್ಲಿಷ್ ರಾಯನಾಗಿ ಅಂಗೀಕರಿಸಿದ್ದರಿಂದ, ಅನ್ನೆಂಬವಳು ಅವನಿಗೆ ಜಗಳ ಮಾಡಿದಳು. ಮತ್ತು ಇಂಗ್ಲಿಷ್ ಜನರೊಂದಿಗೆ ಜೆರ್ಮನಿ ಜಾತಿಯವರೂ ಹೊಲಾಂಡ್ ದೇಶಸ್ತರೂ ಒಡಂಬಡಿಕೆ ಮಾಡಿದರು.

ಪ್ರ. ಈ ಜಗಳದ ವೃತ್ತಾಂತಗಳು ಯಾವವು ?

ಉ. ಬಾಡೆನ್ (Baden) ಸೀಮೆಯಲ್ಲಿಯೂ ತೀರೊಲ್ (Tyrol) ಪೈದ್ಮೊಂತ್ (Piedmont) ಸೀಮೆಗಳಲ್ಲಿಯೂ ಫ್ರೆಂಚಿನವರಿಗೆ ಜಯವಾದಾಗ್ಯೂ, ಹೊಲಾಂಡ್ ಬೆಲ್ಜಿಯಂ (Belgium) ಸೀಮೆಗಳಲ್ಲಿ ಒಡಂಪಟ್ಟ ಸೈನ್ಯಗಳು ಮೇಲ್ಗೊಂಡವು. ಆ ಕಾಲದಲ್ಲಿ ಇಂಗ್ಲಿಷವರು ಜಿಬ್ರಾಲ್ತರ್ (Gibraltar) ಎಂಬ ಕೋಟೆಯನ್ನು ಸ್ಪೇನ್ ದೇಶದವರಿಂದ ಕಿತ್ತುಕೊಂಡರು. ಕಡೆಯಲ್ಲಿ ಊತ್ರೆಕ್ತ್ (Utrecht) ಎಂಬ ಪಟ್ಟಣದಲ್ಲಿ, ಹೊಲಾಂಡರಿಗೂ ಇಂಗ್ಲಿಷರಿಗೂ ಮತ್ತು ಫ್ರೆಂಚವರಿಗೂ ಒಂದು ಸಮಾಧಾನದ ಒಡಂಬಡಿಕೆ ಉಂಟಾಯಿತು. (೧೭೧೩)

ಪ್ರ. ಅನ್ನೆಂಬ ರಾಣಿಯ ಪ್ರಧಾನ ಸೇನಾಪತಿಯು ಯಾರು?

ಉ. ಮಾಲ್ಬೊರೊ (Marlborough) ಎಂಬ ಪಾಳ್ಯಗಾರನೇ. ಇವನು ಹೊಂದಿದ ಜಯಗಳಿಂದ ಸ್ವಲ್ಪ ಪ್ರಯೋಜನ ಬಂದಿದ್ದಾಗ್ಯೂ, ಅನೇಕ ಬಹುಮಾನದ ಗುರುತುಗಳು ಅವನಿಗೆ ಕೊಡಲ್ಪಟ್ಟವು.

ಪ್ರ. ಇದಕ್ಕೆ ಯಾವ ಕಾರಣವಾಯಿತು?

ಉ. ವಿಗ್ (Whig) ಮತ್ತು ತೋರಿ (Tory) ಎಂಬ ಈ ಎರಡು ವಿಭಾಗಗಳೊಳಗೆ ಇಂಗ್ಲಿಷ್ ಜನಾಂಗವು ವಿಭೇದವಾಗಿರುತ್ತಿತ್ತು. ಮಾಲ್ಬೊರೊ ಎಂಬವನು ವಿಗ್ ಕಕ್ಷಿಗೆ ಸಂಮಂಧವಾಗಿದ್ದದರಿಂದಲೂ ಆ ವೇಳೆಯಲ್ಲಿ ವಿಗ್ ಗುಂಪಿನವರು ಅಧಿಕಾರ ಹೊಂದಿದ್ದರಿಂದಲೂ ಇವನಿಗೆ ಇಷ್ಟು ಗೌರವ ದೊರಕಿತು.

ಪ್ರ. ಈ ಎರಡು ಗುಂಪಿನವರ ತಾತ್ಪರ್ಯವು ಎಂಥದ್ದು?

ಉ. ವಿಗ್ ಗುಂಪಿನವರು ಪ್ರಜೇ ಧೊರೆತನವಂನೂ ಪ್ಯುರಿಟನ್ ಪತಿತನವಂನೂ ಅಪೇಕ್ಷಿಸುತ್ತಿದ್ದರು. ತೋರಿ ಎಂಬವರೋ ಅಂಧರೆ, ರಾಯನ ಅಧಿರಾರವಂನೂ ಅಂಗ್ಲಿಕನ್ ಪತಿತನವಂನೂ ಆದರಿಸುತ್ತಿದ್ದರು.

ಪ್ರ. ಅಧಿಕಾರವು ವಿಗ್ ಪಾರ್ಶ್ವದಲ್ಲಿ ನೆಲೆಗೊಂಡಿತೋ?

ಉ. ಇಲ್ಲ. ಯಾಕೆಂದರೆ, ರಾಣಿಯು ಇವರ ಮೇಲೆ ಅಸಂತುಷ್ಟ ಉಳ್ಳವಳಾಗಿ ಇದ್ದಳು.

ಪ್ರ. ವಿಗ್ ಗುಂಪಿನ ಮಂತ್ರಿಗಳಿಗೆ ಬದಲಾಗಿ ಅಧಿಕಾರ ಕೊಂಡಿದವರ್ಯಾರು ?

ಉ. ಬೋಲಿಂಗ್‌ಬ್ರೋಕ್ (Bolingbroke) ಎಂಬ ಪ್ರಭೂ ಮತ್ತು ಒಕ್ಸ್‌ಫೋರ್ಡೆಂಬ ಪಾಳ್ಯಗಾರನೂ.

ಪ್ರ. ಆ ಕಾಲದಲ್ಲಿ ಆದಂಥಾ ಮುಖ್ಯ ಕಲರುವು ಯಾವದು ?

ಉ. ತೋರಿ ಪಾರ್ಶ್ವದವನಾಗಿದ್ದಂಥಾ ಸಚಿವಿರಿಲ್ (Sacheverel) ಎಂಬ ಒಬ್ಬ ಪಾದ್ರಿಯು ಲೊಂಡನ್ ಪಟ್ಟಣದಲ್ಲಿ ಪ್ರಸಂಗ ಮಾಡಿದ್ದೇನಂದರೆ: "ಅಂಗ್ಲಿಕನ್ ಮತವೇ ಹೊರ್ತು ಬೇರೆ ಮತ ಬೇಕಿಲ್ಲವೆಂತಲೂ ವಿರೋಧಿಸುವವರನ್ನು ಕೊಲ್ಲ ಬೇಕೆಂತಲೂ" ಪ್ರಸಂಗಿಸಿದನು.

ಪ್ರ. ಅವನಿಗೆ ಯಾವದೊಂದು ಶಿಕ್ಷೆಯಾಯಿತೋ?

ಉ. ವಿಗ್ ಪಾರ್ಶ್ವದವರು ಅವನ ಮೇಲೆ ಫಿರ್ಯಾದಿ ಮಾಡಿದ್ದಾಗ್ಯೂ, ಇವನಿಗೆ ಸಹಾಯ ಮಾಡುತ್ತಿದ್ದ ಪ್ರಜೆಗಳು ಇವನ ವಿರೋಧಿಗಳನ್ನು ಬೆದರಿಸಿ, ಕೆಲವು ಮನೆಗಳನ್ನು ಸುಟ್ಟು, ರಾಣಿಗೆ ಮೊದಲಾಗಿ ಇವನಿಗೋಸ್ಕರ ಮನವಿ ಮಾಡಿದರು.

ಪ್ರ. ಕಡೆಯಲ್ಲಿ ತೀರ್ಪು ಹ್ಯಾಗೆ ಉಂಟಾಯಿತು?

ಉ. ಇವನು ಅಪರಾಧಸ್ತನೆಂದು ನಿರ್ಣಯಿಸಲ್ಪಟ್ಟದ್ದರಿಂದ, ಇವನು ೩ ವರುಷದ ಮಟ್ಟಿಗೂ ಪ್ರಸಂಗಿಸದ ಹಾಗೂ ಇವನ ಗ್ರಂಥಗಳು ದಹಿಸಲ್ಪಡುವ ಹಾಗೂ ಅಧಿಪತಿಗಳು ಕಟ್ಟಳೆ ಮಾಡಿದರು.

ಪ್ರ. ಇಂನು ವಿಗ್ ಕಕ್ಷಿಯವರಿಂದ ಅನ್ನ ರಾಣಿಯು ಯಾವದೊಂದು ತೊಂದರೆ ಪಟ್ಟಳೋ?

ಉ. ಹೌದು; ಈಕೆಯು ಆಶೆಗೆ ವಿರೋಧವಾಗಿ ಪಾರ್ಲಮೆಂತವರು ಹನೋವೆರ್ (Hanover) ವಂಶದಲ್ಲಿ ರಾಜ್ಯದ ಬಾಧ್ಯತೆಯಂನು ನೇಮಿಸ ಬೇಕೆಂದು ಹೇಳಿದರು. ೩ ನೇ ವಿಲ್ಯಂ ಎಂಬವನ ಕಾಲದಲ್ಲಿ, ಜೇಂಸೆಂಬವನ ಸಂತತಿಯವರಂನು (ಕಥೋಲಿಕರಾದದರಿಂದ) ಸಿಂಹಾಸನದಿಂದ ತಳ್ಳುವ ಹಾಗೂ, ಅವರಿಗೆ ಬದಲಾಗಿ ಪ್ರೋತೆಸ್ತಾಂತರಾದ ಹನೋವೆರ್ ವಂಶವುಳ್ಳ ಸೋಫಿಯ (Sophia) ಧೊರೆಸಾನಿಯಂನೂ ಇವಳ ಸಂತತಿಯಂನೂ ಏರ್ಪಡಿಸುವಹಾಗೂ, ಪಾರ್ಲಮೆಂತಿನಲ್ಲಿ ನಿಬಂಧನೆ ಮಾಡಲ್ಪಟ್ಟಿತು. ಆದದರಿಂದ ಅನ್ನ ಎಂಬವಳ ಸಹೋದರನಾದ ೩ ನೇ ಜೇಂಸೆಂಬವನಿಗೆ ಅನ್ಯಾಯವಾಯಿತು.

ಪ್ರ. ವಿಗ್ ಗುಂಪಿನವರು ರಾಣಿಯಿಂದ ಬೇರೆ ಏನಾದರೂ ಕೇಳಿದರೋ ?

ಉ. ಹೌದು. ವಾರ್ಟನ್ (Wharton) ಎಂಬವನು ೩ ನೇ ಜೇಂಸೆಂಬ ಪ್ರಧಾನಿಯನ್ನು ಹಿಡಿದು ದ್ರೋಹವಾಗಿ ಒಪ್ಪಿಸುವವರಿಗೆ ಒಂದು ದೊಡ್ಡ ಇನಾಮು ಮೊಕರೂರು ಮಾಡಬೇಕೆಂದು ಹೇಳಿದನು. ಮತ್ತು ಕೌಪೆರ್ (Cowper) ಹಲಿಫಕ್ಸ್ (Halifax) ಎಂಬ ಇಬ್ಬರು ಪ್ರಭುಗಳು ಅಂಥಾ ಆಲೋಚನೆಯನ್ನು ಸಾಧಿಸಿದರು. ಆದರೆ, ಅನ್ಯ ದೇಶದಲ್ಲಿ ಸಮಾಧಾನವಾಗಿ ಜೀವಿಸುತ್ತಿದ್ದ ಆ ರಾಜಪುತ್ರನ

ಪ್ರಾಣಕ್ಕೆ ಮೋಸ ಪ್ರಯತ್ನಿಸುವದು ಬಹು ಹೀನವಾದ ದ್ರೋಹವೆಂದು ನೋರ್ಥ್ (North), ಗ್ರೇ, ಎಂಬ ಇಬ್ಬರು ಧೊರೆಗಳು ಅಡ್ಡಿ ಮಾಡಿದ್ದರಿಂದ, ರಾಣಿಯು ಅಂಥ ಮನವಿಯನ್ನು ಸಡ್ಡೆಮಾಡದೆ ತಳ್ಳಿಬಿಟ್ಟಳು.

ಪ್ರ. ಕಥೋಲಿಕರಿಗೆ ವಿರೋಧವಾದ ಇನ್ನೊಂದು ಮನವಿ ಮಾಡಲ್ಪಟ್ಟಿತೋ ?

ಉ. ಹೌದು. ರಾಣಿಯು ಜೇಸ್ವಿತರನ್ನೂ ರೋಮನ್ (Roman) ಕಥೋಲಿಕ್ ಮೇತ್ರಾಣಿಯವರನ್ನೂ ಗುರುಗಳನ್ನೂ ೩ ನೇ ಜೇಂಸೆಂಬ ಪ್ರಧಾನಿಯ ಪಾರ್ಶ್ವದವರನ್ನೂ ನೀಗಿಸುವದಕ್ಕೆ ಹೀನ ಶಿಕ್ಷೆಗಳನ್ನು ನೇಮಿಸುವಬಗ್ಗೆ ಪ್ರೋತೆಸ್ತಾಂತರು ಕೇಳಿದರು; ಆದರೆ ಅದನ್ನು ಮಾಡುವದಕ್ಕೆ ಮುಂಚೆ ಸತ್ತಳು.

ಪ್ರ. ರಾಣಿಯು ಸಾಯುವದಕ್ಕಿದ್ಧಾಳೆಂದು ವಿಗ್ ಗುಂಪಿನವರು ನೋಡಿದಾಗ ಏನು ಮಾಡಿದರು ?

ಉ. ತಮಗೆ ಗುರಿಕಾರನಾಗಿ ಸೋಮೆರ್ಸ್ (Somers) ಎಂಬ ಪ್ರಭುವನ್ನು ನೇಮಿಸಿಕೊಂಡು, ದಂಡೆತ್ತಿ, ಕೆನ್ಸಿಂಗ್ಟನ್ (Kensington) ಉಪಗ್ರಾಮವನ್ನೂ ಲೊಂಡನ್ ನಗರವನ್ನೂ ಶಿಪಾಯಿಗಳಿಂದ ಮುತ್ತಿಸಿ, ರಾಣಿಯು ಸಾಯುವ ವೇಳೆಯಲ್ಲಿ, ಹನೋವೆರ್ ವಂಶದವನಾದ ಜೋರ್ಜೆಂಬವನನ್ನು ರಾಯನಾಗಿ ಅಂಗೀಕರಿಸುವಂತೆ ಪ್ರಜೆಗಳಿಗೆ ಕಡ್ಡಾಯ ಮಾಡಿದರು.

ಪ್ರ. ಅನ್ನ ಎಂಬ ರಾಣಿಯು ಯಾವಾಗ ಸತ್ತಳು?

ఉ. ౧౭౧౪ నే ఇసవియల్లియూ తంన ప్రాయద ౫౦ నే సంవత్సరదల్లియూ సత్తళు. ఈకెగె మధ్యమ సామర్థ్యవూ శాంతియూ నీతియూ ఇత్తు; ఆదరె తంన తందెయవరంను కైబిట్టు ద్రోహ మాడిద్దు ఈకెగె నిత్య అపకీర్తియాగిరువదు.

## బ్రన్స్విక్ (Brunswick) రాయరుగళ రాజ్యభార

## ౧ నే జోర్జ్ (George I.)

(౧౭౧౪ — ౧౭౨౭)

ప్ర. అన్నెంబ రాణియవళిగె బదలాదవన్యారు?

ఉ. హనోవెర్ సీమెయ ధొరెయాద జోర్జెంబవనే; యాతక్కెందరె, రాజ్యభారక్కె నేమిసల్పట్టవళాద సోఫియ ఎంబ ధొరెసాని స్వల్ప హొత్తిగె ముంచె సత్తిద్దళు; మత్తు జోర్జను ఇవళ జ్యేష్ఠ పుత్రనాగిద్దదరింద ఇంగ్లాండ్ కిరీటక్కె బాధ్యస్తనాదను.

ప్ర. ఈ హొస రాయను శేరుత్తలే ఏను మాడిదను?

ఉ. తోరియవరంను బరుశా అసంహింసి,

ಅವರಂನು ಉದ್ಯೋಗಗಳಿಂದ ಬರತರಪು ಮಾಡಿ, ಅವರಿಗೆ ಬದಲಾಗಿ ವಿಗ್ ಪಾರ್ಶ್ವದವರಂನು ಸ್ಥಾಪಿಸಿದನು.

ಪ್ರ. ಜನರು ಇದಂನು ಸಂತೋಷದಿಂದ ನೋಡಿದರೋ ?

ಉ. ಇಲ್ಲ. ಆದರೆ ರಾಯನು ವಿರೋಧಿಸುವವರಂನು ಪೇಪಿಸ್ತರು (Papists) ಎಂದೂ 3 ನೇ ಜೇಂಸನ ಸ್ನೇಹಿತರೆಂದೂ ಹಂಗಿಸಿದ್ದರಿಂದಲೂ, ಕಠಿಣವಾದ ಶಿಕ್ಷೆಗಳಿಂದ ಬೆದರಿಸಿದ್ದರಿಂದಲೂ, ಸುಂಮನೆ ಆದರು.

ಪ್ರ. ಹೊಸ ರಾಜ ವಂಶಕ್ಕೆ ಲೊಂರ್ಡ ಪಟ್ಟದವರು ಯಾವ ಅವಮಾನ ಮಾಡಿದರು ?

ಉ. ರಾಯನ ಒಡ್ಡಂತಿಯಂನು ಆಚರಿಸುವವರಂನು ದೂಷಿಸಿ ನಿಂದಿಸಿದ್ದಲ್ಲದೆ, ಬೇರೆ ತಿಥಿಯಲ್ಲಿ ಸ್ತ್ಯುವರ್ಟ್ ವಂಶದ ರಾಯರಿಗೆ ಸ್ತೋತ್ರವಾಗಿ ಉತ್ಸವವಂನು ಕೊಂಡಾಡಿದರು.

ಪ್ರ. ಅವರಿಗೆ ಯಾವದೊಂದು ಶಿಕ್ಷೆಯಾಯಿತೋ?

ಉ. ಹೌದು; 30 ಮಂದಿ ಶರೆಯಲ್ಲಿ ಇರಿಸಲ್ಪಟ್ಟರು. ಮತ್ತು ಬೊರ್ನೋಯಿಸ್ (Bournois) ಎಂಬ ಒಬ್ಬ ಉಪಾಧ್ಯಾಯನು ಜೋರ್ಜಿಗೆ ಕಿರೀಟದ ಮೇಲೆ ಬಾಧ್ಯತೆ ಇಲ್ಲವೆಂದು ಹೇಳಿದ್ದರಿಂದ, ಸಾಯುವತನಕ ಚಾಟಿಗಳಿಂದ ಹೊಡೆಯಲ್ಪಟ್ಟನು.

ಪ್ರ. ಜೋರ್ಜೆಂಬವನು ತೋರಿಯವರಿಗೆ ವಿರೋಧವಾಗಿ ಇಂನೇನು ಮಾಡಿದನು ?

ಉ. ತಾನು ಪಾರ್ಲಮೆಂತ್ ಸಭೆಯಲ್ಲಿ ಬರು ರೌದ್ರ ಪ್ರಸಂಗವಂನು ಮಾಡಿದ ತರುವಾಯ, ತೋರಿ ಕಕ್ಷಿಗೆ ತಲೆಯುವರಾದ ಬೋಲಿಂಗ್ ಬ್ರೋಕ್, ಒಕ್ಸ್ ಫೋರ್ಡ್, ಒರ್ಮೊಂಡ್ (Ormond), ಎಂಬ ಧೊರೆಗಳಂನು ಕಚ್ಚೇರಿಗೆ ಕರೈಸಿದನು.

ಪ್ರ. ಅದರಿಂದ ಏನಾಯಿತು ?

ಉ. ಒರ್ಮೊಂಡ್, ಬೋಲಿಂಗ್ ಬ್ರೋಕ್, ಇಬ್ಬರು ಫ್ರಾನ್ಸ್ ಸೀಮೆಗೆ ತಪ್ಪಿಸಿ ಕೊಂಡ್ಹೋದರು. ಅವರ ಜಿಂದಿಗೆ ಮಾಲು ಎಲ್ಲಾ ಜಪ್ತಿ ಮಾಡಲ್ಪಟ್ಟಿತು. ಒಕ್ಸ್ ಫೋರ್ಡ್ ಧೊರೆಯೋ ಅಂದರೆ, ೨ ವರುಷದ ಮಟ್ಟಿಗೂ ಕರೆಪಟ್ಟನು.

ಪ್ರ. ಅಂಥಾ ಜುಲಿಮೆಯಿಂದ ಏನು ಫಲವಾಯಿತು?

ಉ. ೧೭೧೫ ನೇ ಇಸವಿ, ೩ ನೇ ಜೇಂಸೆಂಬವನಿಗೋಸ್ಕರ, ಸ್ಕೊತ್ಲಾಂಡ್ ದೇಶದಲ್ಲಿ ಮಾರ್ (Mar), ಕರ್ನ್ವಾಥ್ (Carnwath), ವಿಂತೋನ್ (Vintoun), ಕೆಂಮೂರ್ (Kenmuir) ಎಂಬ ಧೊರೆಗಳೂ, ಇಂಗ್ಲಾಂಡ್ ದೇಶದಲ್ಲಿ ಡೆರ್ವೆಂತ್ವಾತೆರ್ (Derwentwater) ಪ್ರಭೂ ದಂಡೆತ್ತಿ ದಂಗೆ ಮಾಡಿದರು. ಆದರೆ ರಾಯನ ದಂಡಿನವರಿಂದ ಜಯಿಸಲ್ಪಟ್ಟರು.

ಪ್ರ. ಅನೇಕರಿಗೆ ಶಿಕ್ಷೆಯಾಯಿತೋ ?

ಉ. ಸರಕಾರದ ಕೈಯಲ್ಲಿ ಯಾರು ಸಿಕ್ಕಿದರೋ, ಕನಿಕರವಿಲ್ಲದೆ ಹತಮಾಡಲ್ಪಟ್ಟರು. ಚಿಲ್ಲರ ಜನರಂನು ಗಲ್ಲಿಗೆ ಹಾಕುವರು, ಧೊರೆಗಳಿಗೆ ತಲೆ ಕಡಿಯುವರು.

ಪ್ರ. ಜೋರ್ಜೆಂಬ ರಾಯನು ಕೆಲವರಿಗೆ ಮಾಫು ಮಾಡಲಿಲ್ಲವೋ ?

ಉ. ಇಲ್ಲ. ಮರಣಕ್ಕೆ ನಿರ್ಣಯಿಸಲ್ಪಟ್ಟ ಆ ಧೊರೆಗಳ ಹೆಂಡತಿಗಳೂ ಪಾರ್ಲಮೆಂತಿನವರೂ ಸಹಾ ಕೆಲಬರಿಗೆ ಮಂನಿಸ ಬೇಕೆಂದು ದೈನ್ಯವಾಗಿ ಬಿಂನಹಿಸಿದಾಗ್ಯೂ, ಆ ಧೊರೆಗಳಂನು ತಾಮಸವಿಲ್ಲದೆ ಕೊಲ್ಲಿಸಿದನು.

ಪ್ರ. ಈ ರಾಜ್ಯಭಾರದಲ್ಲಿ ಇಂನು ಅವಧಾನಕ್ಕೆ ತಕ್ಕ ಸಂಗತಿ ಯಾವದು ?

ಉ. ದಕ್ಷಿಣ ಸಮುದ್ರದ ವ್ಯಾಪಾರವೆಂಬ ಸಂಗತಿಯೇ. ಲಾ (Law) ಎಂದು ಕರೆಯಲ್ಪಟ್ಟ ಒಬ್ಬ ಸ್ಕೋಚ್ ಜಾತಿಯವನು, ದಕ್ಷಿಣ ಸಮುದ್ರದ ದ್ವೀಪಗಳಲ್ಲಿ ಬಹು ಪ್ರಯೋಜನವಾದ ವ್ಯಾಪಾರ ಮಾಡ ಬಹುದೆಂದು ಜಂಭ ಮಾಡಿಕೊಂಡು, ಅತಿನಂಬಿಕೆಯುಳ್ಳ ಅನೇಕರಿಂದ ತನಗೆ ಋಣ ಕೊಡಿಸಿಕೊಂಡು, ಕಡೆಯಲ್ಲಿ ಲೆಖ್ಖವಿಲ್ಲದ ಜನರಿಗೆ ನಷ್ಟಬರ ಮಾಡಿದನು.

ಪ್ರ. ಇಂನೂ ಈ ರಾಜ್ಯಭಾರದಲ್ಲಿ ಬೇರೆ ಕಲಹವಾಯಿತೋ ?

ಉ. ೩ ನೇ ಜೇಂಸೆಂಬವನಂನು ಸಿಂಹಾಸನದ ಮೇಲೆ ಪುನಃ ಸ್ಥಾಪಿಸುವ ಹಾಗೆ ಒಂದು ಹೊಸ ಸಂಚು ಉಂಟಾಯಿತು. ಆದರೆ ಅದು ಸಹ ತಪ್ಪಿ ಹೋಗಲಾಗಿ, ಅದಕ್ಕೆ ಕೈಕೊಟ್ಟಂಥವರೊಳಗೆ ರೊಚೆಸ್ತೆರ್ ಪಟ್ಣದ ಮೇತ್ರಾಣಿಯವರಾದ ಅತೆರ್ಬರಿ (Atterbury) ಎಂಬವರು

ಗಡಿ ದಾಟಿಸಲ್ಪಟ್ಟರು. ಲೇಯರ್ (Layer) ಎಂಬ ಒಬ್ಬ ಧೊರೆಯು ಗಲ್ಲಿಗೆ ಹಾಕಲ್ಪಟ್ಟನು. ಐರಿಷ್ ಗುರುಗಳಾದ ನೀನೋ (Neynoe) ಎಂಬವರು ತಂಮನ್ನು ಹಿಡಿಯ ಬಂದವರಂನು ತಪ್ಪಿಸಲೆತ್ನಿಸಲಾಗಿ, ಥೇಂಸ್ (Thames) ನದಿಯಲ್ಲಿ ಮುಣಿಗಿ ಸತ್ತರು.

ಪ್ರ. ೧ನೇ ಜೋರ್ಜೆಂಬವನು ಸಾಯುವಾಗ ಅವನಿಗೆ ಎಷ್ಟು ಪ್ರಾಯವಿತ್ತು?

ಉ. ೬೭ ಪ್ರಾಯದವನಾಗಿದ್ದನು; ಇಂಗ್ಲಾಂಡ್ ಸೀಮೆಯಲ್ಲಿ ೧೩ ವರುಷ ಆಳಿದನು.

## ೨ನೇ ಜೋರ್ಜ್ (George II.)

### (೧೭೨೭—೧೭೬೦)

ಪ್ರ. ಈ ರಾಜ್ಯಭಾರದ ಮೊದಲನೇ ವೃತ್ತಾಂತವು ಯಾವದು?

ಉ. ಸ್ಪೇನ್ ದೇಶದವರೊಂದಿಗೆ ಯುದ್ಧ ಆಗುವದಕ್ಕಿತ್ತು, ಆದಾಗ್ಯೂ ಆ ವೇಳೆಗೆ ನೆರವೇರದೆ ಹೋಯಿತು. ಅಮೇರಿಕ (America) ಖಂಡದಲ್ಲಿ ಮಾತ್ರವೇ ಪರಿಪರಿಯಾದ ಫಲದೊಂದಿಗೆ ಕೆಲವು ಸಮುದ್ರದ ಜಗಳಗಳು ಉಂಟಾದವು.

ಪ್ರ. ಆ ಜಗಳಗಳಿಗೆ ಏನು ಕಾರಣವಾಗಿತ್ತು?

ಉ. ಸ್ಪನಿಷ್ ದೇಶಸ್ತರು ಸ್ವತಂತ್ರಿಸಿದ್ದ ಕಂಪೇಚಿ

(Campeachy) ಎಂಬ ಕೇವಿನ ಬಳಿಗೆ ಇಂಗ್ಲಿಷವರು ಮರ ಕಡಿಯುದ ಹಾಗೆ ನಿಷೇಧಿಸಲ್ಪಟ್ಟದ್ದು ಜಗಳಕ್ಕೆ ಕಾರಣವಾಯಿತು.

ಪ್ರ. ಯಾವ ಸಮಯದಲ್ಲಿ ಇಂಗ್ಲಿಷವರಿಗೆ ಜಯವಾಯಿತು ?

ಉ. ಮೊದಲು ವೆರ್ನೋನ್ (Vernon) ಎಂಬ ಧೊರೆಯು ಪೋರ್ತೋ ಬೆಲ್ಲೋ (Porto Bello) ಎಂಬ ಪಟ್ಟಣವನ್ನು ಹಿಡಿದನು. ಮತ್ತು ಅನ್ಸೋನ್ (Anson) ಎಂಬವನು ಒಂದು ಸ್ಪನಿಷ್ ಹಡಗ ಜಯಿಸಿ, ಅದರಲ್ಲಿದ್ದ ೩೦ ಲಕ್ಷ ರೂಪಾಯಿ ಇಂಗ್ಲಾಂಡ್ ದೇಶಕ್ಕೆ ತಂದನು.

ಪ್ರ. ಯಾವ ಸ್ಥಳದಲ್ಲಿ ಇಂಗ್ಲಿಷವರಿಗೆ ಅಪಜಯವಾಯಿತು ?

ಉ. ಅಮೇರಿಕದಲ್ಲಿರುವ ಕರ್ಥಜೇನ ಪಟ್ಟಣವನ್ನು ನಿರ್ಮೂಲ ಮಾಡ ಪ್ರಯತ್ನಿಸುವಾಗ, ವೆರ್ನೋನೆಂಬವನಿಗೆ ದೊಡ್ಡ ನಷ್ಟವಾಯಿತು; ಮತ್ತು ಅವನಿಗೆ ಸಹಾಯ ತಂದ ಅನ್ಸೋನ್ ಎಂಬವನ ಹಡಗಗಳಲ್ಲಿ ಸಹಾ ಅನೇಕವು ನಾಶನವಾದವು.

ಪ್ರ. ಲೊಂಡನಿನಲ್ಲಿ ಒಂದು ಕಲಹ ಉಂಟಾದದ್ದು ಯಾಕೆ ?

ಉ. ವಲ್ಪೋಲ್ (Walpole) ಎಂಬ ಮಂತ್ರಿಯು ಜನರ ಮೇಲೆ ಒಂದು ಬಗೆ ಸುಂಕವನ್ನು ಸ್ಥಾಪಿಸ ಪ್ರಯತ್ನಿಸಿದ್ದರಿಂದ, ಪ್ರಜೆಗಳು ದಂಗೆ ಎಬ್ಬಿಸಿ, ಇವನ ಪ್ರತಿಮೆಯ

ನ್ನು ದಹಿಂಸಿಬಿಟ್ಟರು. ಆಗ ಮಂತ್ರಿಯು ತಂನ ಆಲೋಚನೆಯಂನು ಬದಲಾಯಿಸಿದನು; ಆದರೂ ಕೊಂಚದರೊಳಗೆ ಬೇರೆ ಕಾರಣಗಳಿಂದ ಅವನು ತಂನ ಉದ್ಯೋಗ ಬಿಡ ಬೇಕಾಗಿತ್ತು.

ಪ್ರ. ಆ ಕಾಲದಲ್ಲಿ ಒಂದು ವಿಸ್ತಾರವಾದ ಜಗಳವು ಯುರೋಪ್ (Europe) ಖಂಡದಲ್ಲಿ ಆಗಲಿಲ್ಲವೋ?

ಉ. ಹೌದು. ಜೆರ್ಮನಿ ಚಕ್ರವರ್ತಿಯಾದ ೬ನೇ ಚಾರ್ಲ್ಸ್ ಎಂಬವನು ಸತ್ತ ಬಳಿಕ, ಇವನ ಮಗಳಾದ ಮರೀಯ ಥೆರೇಸ (Maria Theresa) ಎಂಬವಳು ರಾಜ್ಯಭಾರ ಮಾಡದಹಾಗೆ ಫ್ರಾನ್ಸ್, ಸಕ್ಸೊನಿ, ಬಾವರಿಯ (Bavaria) ಎಂಬ ದೇಶಗಳವರು ಒಡಂಬಡಿಕೆ ಮಾಡಿದರು. ಇವರಿಗೆ ವಿರೋಧವಾಗಿ ಇಂಗ್ಲಿಷವರು ಓಸ್ತ್ರಿಯದವರಿಗೆ (Austrians) ಸಹಾಯಕರಾಗಿದ್ದರು.

ಪ್ರ. ಆ ಜಗಳಗಳ ವೃತ್ತಾಂತವಂನು ವಿವರಿಸು.

ಉ. ೧೭೪೩ನೇ ಇಸವಿಯಲ್ಲಿ, ೨ನೇ ಜೋರ್ಜೆಂಬವನು ಒಡಂಪಟ್ಟ ೨ ಸೈನ್ಯಗಳನ್ನು ನಡಿಸುತ್ತಿರಲಾಗಿ, ಫ್ರೆಂಚ್ ದಂಡನ್ನು ಬಾವರಿಯ ಸೀಮೆಯೊಳಗಿಂದ ತಳ್ಳಿದನು. ಆದರೆ, ೧೭೪೫ನೇ ಇಸವಿ, ಜೋರ್ಜೆಂಬವನ ಮಗನಾದ ಕೊಂಬೆರ್ಲಾಂಡ್ (Cumberland) ಪ್ರಧಾನಿಯು ಆ ೨ ಸೈನ್ಯಗಳಿಗೆ ಶ್ರೇಷ್ಠನಾಗಿ ನೇಮಿಸಲ್ಪಟ್ಟ ಬಳಿಕ, ಫೊಂತನೋಯಿ (Fontenoy) ಎಂಬ ಊರ ಹತ್ರಕ್ಕೆ ಫ್ರೆಂಚರಿಂದ ಸಂಪೂರ್ಣವಾಗಿ ಜಯಿಸಲ್ಪಟ್ಟನು. ಮತ್ತು ತರತರ

ವಾದ ಫಲಪೊಂದಿಗೆ ಜಗಳವು ಪ್ರವರ್ತಿಸಲು, ಕಡೆಯಲ್ಲಿ ೧೭೪೮ ನೇ ಸಂವತ್ಸರದಲ್ಲಿ ಸಮಾಧಾನದ ಕರಾರು ಮಾಡಲಟ್ಟಿತು.

ಪ್ರ. ೧೭೪೫ ನೇ ಇಸವಿ ೩ ನೇ ಜೇಂಸನ ಕುಮಾರನಾದ ಚಾರ್ಲ್ಸ್ ಎಡ್ವಾರ್ಡ್ ಇಂಗ್ಲಾಂಡ್ ಸಿಂಹಾಸನವ ಸ್ವತಂತ್ರಿಸ ಪ್ರಯಾಸ ಪಟ್ಟನೋ ?

ಉ. ಹೌದು; ಅವನು ಥೋಮಸ್ ಶೇರಿಡನ್ (Sheridan) ಇಂನೂ ಬೇರೆ ಕೆಲ ಧೊರೆಗಳ ಸಹಾಯದಿಂದ ಸ್ಕೊತ್ಲಾಂಡಿನಲ್ಲಿ ಜಗಳವಾಡಿ, ಪೆರ್ಥ್ (Perth), ಎಡಿಂಬರ್ಗ್ (Edimburgh), ಕರ್ಲೈಲ್ (Carlisle), ಎಂಬ ಪಟ್ಣಗಳನ್ನು ಹಿಡಿದು, ಡೆರ್ಬಿ (Derby) ಪಟ್ಣದ ಪರಿಯಂತ್ರ ಶೇರಿದನು. ಮತ್ತು ಲೊಂಡನ್ ಪಟ್ಣದ ಮೇಲೆ ನಡೆಯಲಾಶಿಯಾಗಿದ್ದಾಗ್ಯೂ, ಇವನ ದಂಡಿನವರು ರಾಜೀಪಡಲಿಲ್ಲಾ.

ಪ್ರ. ಲೊಂಡನ್ ಪಟ್ಣದಲ್ಲಿ ಬಹು ಗಾಬರಿ ಆಗಿರುತ್ತಿತ್ತೋ ?

ಉ. ಹೌದು; ಜೋರ್ಜೆಂಬ ರಾಯನು ತಂನ ಸಮಾನು ಹಡಗಗಳ ಮೇಲೆ ಇರಿಸಿ, ಓಡಿ ಹೋಗ ಉಪಾಯ ನೋಡುತ್ತಿದ್ದನು. ಇವನ ಮಂತ್ರಿಯಾದ ನ್ಯೂಕಾಸಲ್ (Newcastle) ಎಂಬ ಪಾಳ್ಯಗಾರನು ಚಾರ್ಲ್ಸ್ ಎಡ್ವಾರ್ಡನಿಗೆ ಎದುರಾಗಿ ಹೋರಡುವದಕ್ಕೆ ಇದ್ದನು.

ಪ್ರ. ಎಡ್ವಾರ್ಡ್ ಸ್ಕೊತ್ಲಾಂಡಿಗೆ ತಿರಿಗಿ ಹೋದ ಬಳಿಕ ಏನು ಸಂಭವಿಸಿತು ?

ఉ. లొండన్ పట్టణదల్లిద్ద కథోలికరిగె బాధె ఉంటాగి, అనేకరు శరిమనెయల్లి హొరకల్పట్టరు. మత్తు జోర్జెంబవను ఎద్వార్డిగె విరోధవాగి హాలి (Hawley) ఎంబ ధొరెయన్ను ఒందు సైన్య దొందిగె కళుహిసిదను.

ప్ర. ఆగ జగళద వృత్తాంతవు ఏనాయితు ?

ఉ. మొదలు ఫాల్కిర్క్ (Falkirk) ఎంబ స్థళదల్లి ఎద్వార్డ్ జయగొండను. ఆదరె కొంబెర్లాండెంబ ప్రధానియు దొడ్డ సైన్య కూడిసి, ౭౦౦౦ శిపాయిగళన్ను మాత్రవే హొందిదవనాగిద్దంథా ఎద్వార్డెంబ ప్రధానియన్ను కల్లోడెన్ (Culloden) ఎంబ మైదానదల్లి పూరా జయిసిదను.

ప్ర. అపజయ పట్ట తరువాయ ప్రధానియ గతి ఎంథాద్దాయితు ?

ఉ. అవను బహు హింబ్బాద ఆపత్తిగె గురియాగి, ౬ తింగళ వరివిగూ స్కొత్లాండ్ బెట్టగళొళగె అవుచి కొండను. ఇంగ్లిషవరు అవనన్ను హిడియ బల్లంథవనిగె 3 లక్ష రూపాయి ఇనాము నేమిసిద్దాగ్యూ, స్కొచ్ జాతియవరొళగె ఒబ్బనాదరూ ద్రోహ మాడలిల్లా. కడేలి, నిర్భాగ్యస్థనాద ఆ ప్రధానియు తన్న, ఐరిష్ సేవకర ఒత్తాసెయింద హడగ ఏరి, ఫ్రాన్స్ సీమెగె తిరిగి తప్పిసి కొండు హోదను.

ಪ್ರ. ಕಲ್ಲೋಡೆನ್ ಎಂಬ ಜಗಳವಾದ ತರುವಾಯ, ಕೊಂಬೆರ್ಲಾಂಡ್ ಪಾಳ್ಯಗಾರನು ಏನು ಮಾಡಿದನು ?

ಉ. ಘಾಯ ಪಟ್ಟವರೆಲ್ಲರನ್ನೂ, ಜಗಳ ನೋಡ ಬಂದಂಥಾ ತಪ್ಪಿಲ್ಲದ ಅನೇಕ ಜನರನ್ನೂ, ಕೊಲ್ಲಿಸಿದನು. ಸೀಮೆಯನ್ನು ಲೂಟಿ ಮಾಡುವಂತೆ ಕೆಲವು ತುಕ್ಕಡಿಗಳನ್ನು ಕಳುಹಿಸಿದನು. ಮತ್ತು ೫೦ ಮೈಲು ದೂರದಲ್ಲಿ ಸುತ್ತು ಮುತ್ತು ಗಂಡು, ಹೆಣ್ಣು, ಮುಪ್ಪು, ಎಳೆ, ಮನುಷ್ಯ, ಮೃಗ, ಒಂದೂ ನೋಡದೆ, ಎಲ್ಲಾ ಪರಿಚ್ಛೇದವಾಗಿ ನಾಶನ ಮಾಡಿಸಿದನೆಂದು ಪ್ರೋತೆಸ್ತಾಂತ್ ಚರಿತ್ರೆಗಾರನಾದ ಸ್ಮೋಲೆತ್ (Smollett) ಎಂಬವನು ಬರೆದು ಇರಿಸಿದ್ದಾನೆ. ಆ ಕಲಹದಲ್ಲಿ ಪಾಲುಗಾರರಾದಂಥ ಧೊರೆಗಳು ತಲೆ ಕಡಿಯಲೂ, ಗಲ್ಲಿಗೆ ಹಾಕಲೂ, ಹೊಟ್ಟೇ ಶೀಳಿಸಲೂ ಪಟ್ಟರು.

ಪ್ರ. ಆ ರಾಜ್ಯಭಾರದಲ್ಲಿ ನಡೆದ ಬೇರೆ ಮುಖ್ಯ ಸಂಗತಿಗಳೇನು ?

ಉ. ಹಿಂದುಸ್ಥಾನದಲ್ಲಿ ಕ್ಲೈವ್ (Clive) ಎಂಬ ಧೊರೆಯು ಕಲ್ಕತ್ತ (Calcutta) ಇಲಾಖೆಯನ್ನು ಹಿಡಿದ್ದೂ, ವುಲ್ಫ್ (Wolf) ಎಂಬ ಸೇನಾಪತಿಯಿಂದ ಅಮೇರಿಕದಲ್ಲಿ ಕೆಬೆಕ್ (Quebec) ಪಟ್ಣವು ಹಿಡಿಯಲ್ಪಟ್ಟದ್ದೂ, ಇವುಗಳೇ. ಮತ್ತು ತನ್ನ ಕಾರ್ಯಗಳ ಸ್ಥಿತಿ ಅನುಕೂಲವಾಗಿರುವ ಸಮಯದಲ್ಲಿ, ಜೋರ್ಜೆಂಬ ರಾಯನು ಗುಂಡಿಗೆಯ ವ್ಯಾಧಿಯಿಂದ ಸತ್ತನು. ೧೭೨೭ ನೇ ವರುಷದಿಂದ ೧೭೬೦ ನೇ ವರುಷದ ಮಟ್ಟಿಗೂ ಆಳಿದನು.

## ೩ ನೇ ಜಾರ್ಜ್. (George III.)

## (A. D. ೧೭೬೦ — ೧೮೨೦)

---

ಪ್ರ. ೨ ನೇ ಜಾರ್ಜಿಂಬವನಿಗೆ ಬದಲಾದವನ್ಯಾರು?

ಉ. ಇವನ ಮೊಂಮಗನಾದ ೩ ನೇ ಜಾರ್ಜಿಂಬವನೇ. ಏನೆಂದರೆ, ೨ ನೇ ಜಾರ್ಜಿಂಬವನಿಗೆ ಹುಟ್ಟಿದ ಮೂರು ಗಂಡು ಮಕ್ಕಳಾದ ಫ್ರೆಡೆರಿಕ್, ವಿಲ್ಯಂ, ಜಾರ್ಜಿಂಬವರು ಸತ್ತಿದ್ದರಿಂದ, ವೇಲ್ಸ್ ಪ್ರಧಾನಿ ಎಂನಲ್ಪಟ್ಟ ಫ್ರೆಡೆರಿಕನ ಕುಮಾರನಿಗೆ ಕಿರೀಟ ಸಂಪ್ರಾಪ್ತಿಸಿತು.

ಪ್ರ. ಈ ರಾಜ್ಯಭಾರದ ಮುಖ್ಯ ಸಂಗತಿಯಾವದು?

ಉ. ೧೭೭೪ ನೇ ಇಸವಿ ತೊಡಗಿದಂಥಾ ಅಮೇರಿಕದ ಜಗಳವೇ.

ಪ್ರ. ಆ ಜಗಳಕ್ಕೆ ಯಾವ ಕಾರಣವಾಯಿತು?

ಉ. ಜನಾಂಗದ ಸಾಲಗಳು ಅತಿಕ್ರಮಿಸಿದ್ದರಿಂದ, ಇವುಗಳ ಚುಂಗಡಿಯನ್ನಾದರೂ ತೀರಿಸುವಹಾಗೆ, ಜಾರ್ಜಿಂಬ ರಾಯನು ಯೋಚಿಸಿ, ಅಮೇರಿಕ ಸೀಮೆಯಲ್ಲಿ ಮಾರಲ್ಪಡ ತಕ್ಕ ಇಂಗ್ಲಿಷ್ ಸರಕುಗಳಾದ ಗಾಜು, ಕಾಗದ, ಇನ್ನೂ ಬೇರೆ ಸಾಮಾನುಗಳಲ್ಲಿ ಒಂದು ಬಗೆ ಸುಂಕ ಸ್ಥಾಪಿಸಿದನು.

ಪ್ರ. ಈ ಸುಂಕದಿಂದ ಏನು ಸಂಭವಿಸಿತು?

ಉ. ಅಮೇರಿಕದಲ್ಲಿದ್ದ ಇಂಗ್ಲಿಷ್ ಜಾತಿಯವರು ಇಂಥಾ ಸುಂಕಗಳನ್ನು ಅಚ್ಚುವದಿಲ್ಲವೆಂದು ಅಡ್ಡಿಮಾಡಿದ್ದರಿಂ

ದಲೂ, ಇಂಗ್ಲಾಂಡಿನದರು ಖಂಡಿತವಾಗಿ ಕೇಳಿದ್ದರಿಂದಲೂ ಅಮೇರಿಕನರಿಗೂ ಇಂಗ್ಲಿಷ್ ರಾಯನ ದಂಡಿನವರಿಗೂ ಯುದ್ಧ ತೊಡಗಿತು. ಅಮೇರಿಕನರು ಲೆಕ್ಸಿಂಗ್ಟನ್ (Lexington), ಬೋಸ್ಟನ್ (Boston), ಸರತೋಗ (Saratoga) ಎಂಬ ಸ್ಥಳಗಳಲ್ಲಿ ಇಂಗ್ಲಿಷರಂನು ಜಯಿಸಿದ್ದಲ್ಲದೆ, ಫ್ರಾನ್ಸ್ ಸೀಮೆಯವರ ಸಹಾಯವಂನು ಕೇಳಿದರು. ಫ್ರೆಂಚಿನವರು ಅವರಿಗೆ ಸಮುದ್ರದ ಮೇಲೆಯೂ ಭೂಮಿಯ ಮೇಲೆಯೂ ತಮ್ಮ ದಂಡುಗಳಿಂದ ಸಹಾಯ ಮಾಡಿದ್ದರಿಂದ, ಕಡೆಯಲ್ಲಿ ೧೭೮೩ ನೇ ಸಂವತ್ಸರದಲ್ಲಿ ಅಮೇರಿಕನರು ಇಂಗ್ಲಿಷ್ ಅಧಿಕಾರ ತಳ್ಳಿ, ತಂಮ ದೇಶ ಸ್ವತಂತ್ರವುಳ್ಳ ದೇಶವೆಂದು ಪ್ರಕಟಿಸಿದರು; ಮತ್ತು ಇಂಗ್ಲಿಷರು ಅದಕ್ಕೆ ರಾಜೀಪಡ ಅಗತ್ಯವಾದದ್ದಾಯಿತು.

ಪ್ರ. ಅಮೇರಿಕನರೊಳಗೆ ಅಧಿಕ ಪ್ರಖ್ಯಾತಿಯಾದ ಸೇನಾಪತಿಯು ಯಾರು ?

ಉ. ವಷಿಂಗ್ಟನ್ (Washington) ಎಂಬವನೇ. ಇವನು ಯುದ್ಧದ ಸಾಮರ್ಥ್ಯದಿಂದಲೂ ಆಳುವ ವಿವೇಕದಿಂದಲೂ ಸ್ವಭಾವದ ಸದ್ಗುಣಗಳಿಂದಲೂ ಬಹು ಪ್ರಸಿದ್ಧಿಯಾದನು.

ಪ್ರ. ೧೭೯೦ ನೇ ಸಂವತ್ಸರದಲ್ಲಿ ಬಹು ಅವಲಕ್ಷಣವಾದ ಕೆಲವು ಸಂಗತಿಗಳು ನಡೆಯಲಿಲ್ಲವೋ ?

ಉ. ಹೌದು. ಕಥೋಲಿಕರಿಗೆ ವಿರೋಧವಾದ ಕಟ್ಟಳೆಗಳನ್ನು ೧೭೭೮ ನೇ ಸಂವತ್ಸರದಲ್ಲಿ ಪಾರ್ಲಮೆಂತವರು

ಬದಲಾಯಿಸ ಪ್ರಯತ್ನಿಸಿ ಇದ್ದರು. ತಮ್ಮ ಮತದ ಮೇಲೆ
ರುಚ್ಚು ಭ್ರಮೆ ಗೊಂಡಂಥಾ ಪ್ರೋತೆಸ್ತಾಂತರು, ತಮಗೆ
ತಲೆಯುವನಾಗಿ ಜೋರ್ಜ್ ಗೋರ್ದೋನ್ (Gordon)
ಎಂಬ ಪ್ರಭುವನ್ನು ನೇಮಿಸಿಕೊಂಡು, ಲೊಂಡನಿನಲ್ಲಿದ್ದ
ಕಥೋಲಿಕ್ ದೇವಸ್ಥಾನಗಳನ್ನೂ ಮನೆಗಳನ್ನೂ ಸುಟ್ಟು
ಬಿಡಲೂ, ಖೈದಿಗಳಾಗಿದ್ದ ತಮ್ಮ ಪಾರ್ಶ್ವದವರನ್ನು ಬಿಡಿಸಿ
ಫ್ಲೀತ್ (Fleet), ನ್ಯೂಗೇತ್ (Newgate) ಬಂದಿಖಾನೆಗ
ಳನ್ನೂ ದಹಿಸಲೂ ಧೈರ್ಯಗೊಂಡರು.

ಪ್ರ. ಆ ಕಲಹವು ಹ್ಯಾಗೆ ಅಣಗಿಸಲ್ಪಟ್ಟಿತು ?

ಉ. ಕಲಹಕಾರರನ್ನು ನಿಗ್ರಹಿಸುವದಕ್ಕೆ ದಂಡು
ಕಳುಹಿಸಲ್ಪಟ್ಟಿತು; ಆದರೆ ಅವರೊಳಗೆ ೨೦೦ ಮಂದಿ
ಕೊಲ್ಲಲ್ಪಡುವ ಮಟ್ಟಿಗೂ ಗುಬಾರು ತೀರಲಿಲ್ಲಾ. ಇದಲ್ಲದೆ,
ಆ ಕಲಹಕ್ಕೆ ಕಾರಣ ಕರ್ತನಾಗಿದ್ದ ಗೋರ್ದೋನೆಂಬ
ವನು ಯಾವದೊಂದು ಶಿಕ್ಷೆಯಿಲ್ಲದೆ ಪೈತ್ಯದ ನೆವನ
ದಿಂದ ಬಿಡುಗಡೆಯಾದನು.

ಪ್ರ. ಜೋರ್ಜೆಂಬ ರಾಯನು ತನ್ನ ಜ್ಯೇಷ್ಠ ಪುತ್ರನಿಗೆ
ರಾಜ್ಯದ ವಿಚಾರಣೆಯನ್ನು ಒಪ್ಪಿಸಿ ಬಿಟ್ಟದ್ದು ಯಾಕೆ ?

ಉ. ರಾಯನಿಗೆ ಸಂಭವಿಸಿದ ಪೈತ್ಯವು ಅವನು ರಾ
ಜ್ಯಭಾರವನ್ನು ಮಾಡದಹಾಗೆ ಹರಕತ್ತು ಮಾಡಿತು.

ಪ್ರ. ಆ ಕಾಲದಲ್ಲಿ ಹಿಂದು ಸೀಮೆಯ ವೃತ್ತಾಂತ
ಗಳು ಯಾವವು ?

ಉ. ಇಂಗ್ಲಿಷ್ ಜನರು ಬರುವ ಕಾಲ ಪರಿಯಂತ್ರ ಹಿಂ

దర్ ఆలి ( Hyder Ali ) ఎంబ మ్యైసూర రాజనొం
దిగె హోరాడిదరు. కడెయల్లి ఇవన కుమారనూ
బల్లీయనూ ఆద తిప్పు సాహేబన ( Tippu Saheb )
రాజ్యభారదల్లి అవరు మ్యైసూర రాజ్యవన్ను హిడి
దరు.

ప్ర. ౧౭౮౯ నే ఇసవి మొదల్గొండు యు
రోప్ ఖండదల్లి మహా దొడ్డ గుబారు ఉంటా
గల్లిల్లవూ ?

ఉ. హౌదు. ఫ్రాన్స్ దేశదల్లి దొడ్డ కలహ
ఉంటాగి, ౧౬ నే లువిసెంబ రాయనూ రాణియూ
అనేక ప్రభుగళూ గురుగళూ, దేవ విశ్వాసవూ నీతి
యూ ఇల్లదంథా క్రూర ప్రజెగళింద కొల్లల్పట్టరు.

ప్ర. ఇంథా కలహక్కె ముఖ్య కారణగళు యా
వవు ?

ఉ. నూరు సంవత్సరక్కె ముంచె అవిశ్వాసవూ,
మోహాతురవూ, లోకాధికారక్కూ జ్ఞానాధికార
క్కూ విరోధవాద గర్వవూ, ఈ మొదలాద దు
ర్గుణగళూ కెళ్ల శాస్త్రిగళ కుయుక్తియింద జనరల్లి
వ్యాపిసికొండు అభివృద్ధియాదద్దు,— అంథా కల
హక్కె కారణవాయితు.

ప్ర. ఫ్రెంచ్ జనరు రాజధికారక్కె బదలాగి యావ
దౌలత్తు స్థాపిసిదరు ?

ಉ. ರಾಯನನ್ನು ಕೊಂಧಾಕಿದಂಥಾ ಕಲಹಕಾರರು ನೀತಿವಂತರಾದ ಜನರಂನು ಬೆದರಿಸಿ, ನಿಷ್ಠುರವಾದ ಒಂದು ಬಗೆಯ ಪ್ರಜೇ ಧೊರೆತನವಂನು ಸ್ಥಾಪಿಸಿ, ೫, ೬ ವರುಷದ ಮಟ್ಟಿಗೂ ಫ್ರಾನ್ಸ್ ಸೀಮೆಯಲ್ಲಿ ಅನೇಕ ಅಕ್ರಮಗಳನ್ನು ನಡಿಸಿದರು.

ಪ್ರ. ಆ ಪ್ರಜೇ ಧೊರೆತನವು ಹ್ಯಾಗೆ ಮುಗಿಯಿತು?

ಉ. ೧೭೯೩ ನೇ ವರುಷದಿಂದ ೧೮೦೦ ನೇ ವರುಷದ ವರಿವಿಗೂ ಅಧಿಕಾರವು ಪ್ರಜೇ ಸಭೆಗಳ ಕೈಯಲ್ಲಿತ್ತು. ಆದರೆ ನಪೋಲಿಯನ್ (Napoleon) ಎಂಬ ಸೇನಾಪತಿಯು ಮೊದಲು ಶ್ರೇಷ್ಠಾಧಿಕಾರಿ (ಕೊನ್ಸಲ್, Consul) ಎಂಬ ನಾಮಧೇಯವನ್ನೂ ಅದಕ್ಕೆ ತಕ್ಕ ಧೊರೆತನವಂನೂ ತಂನ ಧೈರ್ಯದಿಂದಲೂ ಉಪಾಯದಿಂದಲೂ ಸಂಪಾದಿಸಿಕೊಂಡನು. ಆ ಬಳಿಕ, ೧೮೦೪ ನೇ ಸಂವತ್ಸರದಲ್ಲಿ ಚಕ್ರವರ್ತಿ ಎಂಬ ನಾಮವನ್ನು ಪ್ರಶಿದ್ಧಿಯಾಗಿ ಧರಿಸುವದಲ್ಲದೆ, ಪಾಪುಸ್ವಾಮಿಯವರಿಂದ ತನಗೆ ಅಭಿಷೇಕವಂನು ಕೊಡಿಸಿದನು.

ಪ್ರ. ೧೭೯೩ ನೇ ಸಂವತ್ಸರದಿಂದ ೧೮೧೫ ನೇ ಸಂವತ್ಸರದ ಪರಿಯಂತ್ರಕ್ಕೂ ಯುರೋಪ್ ಖಂಡದಲ್ಲಿ ನಡೆದ ಮುಖ್ಯವಾದ ವೃತ್ತಾಂತಗಳೇನು?

ಉ. ಇವುಗಳಂನು ಈ ಸಂಕ್ಷೇಪವಾದ ಚರಿತ್ರೆಯಲ್ಲಿ ವಿವರಿಸ ಕೂಡದು. ಆದರೆ ಇವುಗಳ ಸಾರಂಶ ಎಂಥೆಂದರೆ, ಇಂಗ್ಲಿಷವರು ಸಮುದ್ರದ ಮೇಲೆ ಫ್ರೆಂಚರಿಗೆ ವಿರೋಧ

ವಾಗಿ ಜಯಗೊಂಡಾಗ್ಯೂ, ಯುರೋಪ್ ಖಂಡದ ಅ
ನೇಕ ರಾಜ್ಯಗಳಲ್ಲಿ ಫ್ರಾನ್ಸ್ ದೇಶದವರು ಪೂರ್ಣ ಅಧಿಕಾ
ರವನ್ನು ಹೊಂದಿದರು. ನಪೋಲಿಯನನು ಬೆಲ್ಜಿಯಂ,
ಹೊಲಾಂಡ್, ಇತಲಿ (Italy), ಓಸ್ತ್ರಿಯ, ಪ್ರಶ್ಯ (Prussia),
ಸ್ಪೇನ್, ಪೋರ್ತ್ಯುಗಾಲ್ (Portugal) ರಾಜ್ಯಗಳನ್ನು
ಹಿಡಿದು, ಒಂದೊಂದರಲ್ಲಿ ತನ್ನ ಬಂಧು ಮಿತ್ರರನ್ನು
ಅರಸರಾಗಿ ಸ್ಥಾಪಿಸಿದನು; ಮತ್ತು ೧೮೦೮ ನೇ ವರುಷದ
ಪರಿಯಂತ್ರ ಎಡ ಬಿಡದೆ ತನ್ನ ಯುದ್ಧಗಳಲ್ಲಿ ಜಯವಂ
ತನಾಗಿ ಇದ್ದನು.

ಪ್ರ. ೧೮೦೮ ನೇ ಸಂವತ್ಸರದಿಂದ ನಪೋಲಿಯನ್
ಚಕ್ರವರ್ತಿಯ ಬೀಳೋಣದ ಪರಿಯಂತ್ರ ನಡೆದ ಪ್ರಧಾನ
ಸಂಗತಿಗಳೇನು?

ಉ. ಸ್ಪೇನ್, ಪೋರ್ತ್ಯುಗಾಲ್, ರಾಜ್ಯಗಳಿಗೆ ಇಂಗ್ಲಿಷರು
ಒತ್ತಾಸೆ ಮಾಡಿದ್ದರಿಂದ, ಕೆಲವು ಸ್ಥಳಗಳಲ್ಲಿ ಫ್ರೆಂಚ್ ಸೇನಾ
ಪತಿಗಳಿಗೆ ಅಪಜಯವಾಯಿತು. ಮತ್ತು ಇನ್ನೂ ಅವರು
ಅನೇಕ ಯುದ್ಧಗಳಲ್ಲಿ ಮೇಲ್ಗೊಂಡಾಗ್ಯೂ, ೧೮೧೩ ನೇ
ಸಂವತ್ಸರದಲ್ಲಿ ಮೇಲೆ ಹೇಳಿದ ಎರಡು ರಾಜ್ಯಗಳಲ್ಲಿ ಫ್ರೆಂ
ಚರ ದೌಲತ್ತು ಮುಗಿಯಿತು.

ಆದರೆ ನಪೋಲಿಯನನ ವಿಶೇಷವಾದ ಆಪತ್ತು ರಶ್ಯ
(Russia) ಸೀಮೆಯಲ್ಲಿ ೧೮೧೨ ನೇ ಸಂವತ್ಸರದಲ್ಲಿ ಸಂಭ
ವಿಸಿತು. ಅವನು ರಶ್ಯನ್ ದೇಶಸ್ಥರನ್ನು ಜಯಿಸಿ, ಮೊಸ್ಕು
(Moscow) ಎಂಬ ಅವರ ಸಂಸ್ಥಾನವನ್ನು ದಹಿಸಿದ ತರು

ವಾಘು, ಆ ಸೀಮೆಯಲ್ಲಿ ಅತಿಶಯವಾದ ಒಂದು ಛಳಿ ಉಂಟಾಗಿ, ಬಟ್ಟೆ, ಭೋಜನ, ಆಧಾರ ಇಲ್ಲದಂಥಾ ಫ್ರೆಂಚ್ ದಂಡಿಗೆ ನಾಶನವುಂಟಾಯಿತು. ಯುರೋಪ್ ರಾಜ್ಯಗಳ ಅರಸರೆಲ್ಲರು ಅಂಥಾ ದುರದೃಷ್ಟವನ್ನು ಕಂಡು, ಏಕವಾಗಿ ಕೂಡಿ, ಫ್ರೆಂಚ್ ದೇಶವನ್ನು ಅಭಿಕ್ರಮಿಸಿ, ಆರು ಯುದ್ಧಗಳಲ್ಲಿ ಜಯಿಸಲ್ಪಟ್ಟಿದ್ದರೂ, ಕಡೆಯಲ್ಲಿ ಮೇಲ್ಗೊಂಡು, ನಪೋಲಿಯನ್ ಚಕ್ರವರ್ತಿಯನ್ನು ಗಡಿದಾಟಿಸಿ, ಅವನಿಗೆ ಬದಲಾಗಿ ಪೂರ್ವ ರಾಯರ ವಂಶದವನಾದ ೧೮ ನೇ ಲುವಿಸೆಂಬವನನ್ನು ಅರಸನಾಗಿ ನೇಮಿಸಿದರು. (೧೮೧೪.)

ಪ್ರ. ಆ ಬಳಿಕ ಯುರೋಪ್ ಖಂಡದಲ್ಲಿ ಸಮಾಧಾನವಾಯಿತೋ?

ಉ. ಇಲ್ಲ. ೧೮೧೫ ನೇ ಸಂವತ್ಸರದಲ್ಲಿ ನಪೋಲಿಯನ್ ಫ್ರಾನ್ಸ್ ಸೀಮೆಯಲ್ಲಿ ತಿರಿಗಿ ಹೊಕ್ಕು, ದಂಡೆತ್ತಿ, ೧೮ ನೇ ಲುವಿಸೆಂಬವನನ್ನು ಬೆಲ್ಜಿಯಂ ಸೀಮೆಯಲ್ಲಿ ಓಡಿಸಿದ್ದಲ್ಲದೆ, ಲಿಜ್ಞೀ (Ligny) ಎಂಬ ಸ್ಥಳದಲ್ಲಿ ಪ್ರಶ್ಯನ್ ದೇಶಸ್ತರನ್ನು ಜಯಿಸಿದನು. (ಜೂನ್ ೧೬ ನೇ). ಅದೇ ದಿನದಲ್ಲಿ ನೇ (Ney) ಎಂಬ ಫ್ರೆಂಚ್ ಸೇನಾಪತಿಯು ಕತ್ರ್ ಬ್ರಾ (Quatre Bras) ಎಂಬ ಸ್ಥಳದಲ್ಲಿ ಬ್ರನ್ಸ್ವಿಕೆಂಬ ಪಾಳ್ಯಗಾರನನ್ನೂ ವೆಲಿಂಗ್ಟನ್ (Wellington) ಎಂಬ ಪ್ರಭುವನ್ನೂ ವಾತೆಲೋನ್ (Waterloo) ಎಂಬ ಊರಿನ ವರಿವಿಗೂ ತಳ್ಳಿದನು. ಆದರೆ ಜೂನ್ ೧೮ ನೇ ತಾರೀಖಿನಲ್ಲಿ, ಅಲ್ಲಿಯೇ

ನಪೋಲಿಯನನು ದೊಡ್ಡ ನಷ್ಟಪಟ್ಟನು. ಇಂಗ್ಲಿಷರು ಪ್ರಶ್ಯರೊಂದಿಗೆ ಕೂಡಿ ಬಾರದ ಹಾಗೆ ಅವನು ವೆಲಿಂಗ್ಟೊನ್ ಎಂಬ ಪ್ರಭುವಿನ ದಂಡಿನ ಮೇಲೆ ಬಿದ್ದಿದ್ದನು; ಸಾಯಂಕಾಲದ ವರಿವಿಗೂ ಎರಡು ರಾಣುವೆಗಳು ಸಮ ಯುದ್ಧವಾಗಿ ಹೋರಾಡುತ್ತಾ ಇದ್ದವು. ಆದರೆ ಸಾಯಂಕಾಲದ ವೇಳೆಯಲ್ಲಿ, ಬ್ಲುಖೆರ್ (Blücher) ಎಂಬವನು ಪ್ರಶ್ಯನ್ ದಂಡಿನ ಸಂಗಡ ಬಂದು, ಆಯಾಸಪಟ್ಟಂಥಾ ಫ್ರೆಂಚ್ ದಂಡಂನು ಮುರಿಸಿದನು. ಒಡಂಪಟ್ಟ ಇಂಗ್ಲಿಷ್ ಪ್ರಶ್ಯನ್ ದಂಡು ಫ್ರೆಂಚ್ ದಂಡಿಗಿಂತಾ ಎರಡಷ್ಟು ದೊಡ್ಡದಾಗಿತ್ತು. (Lingard's Abr. p. 629.)

ಪ್ರ. ಆ ಜಗಳದಿಂದ ಏನು ಫಲವಾಯಿತು?

ಉ. ನಪೋಲಿಯನ್ ಚಕ್ರವರ್ತಿಯು ಸೆಂತೆಲೇನ (St. Helena) ಎಂಬ ಒಂದು ದೂರವಾದ ದ್ವೀಪಕ್ಕೆ ದೇಶಾಂತ್ರಿಯಾಗಿ ಕಳುಹಿಸಲ್ಪಟ್ಟದ್ದರಿಂದ, ೧೮ ನೇ ಲುವಿಸೆಂಬವನು ತಿರಿಗಿ ಸಿಂಹಾಸನವಂನು ಏರಿದನು; ಮತ್ತು ಯುರೋಪಿನಲ್ಲಿ ತಿರಿಗಿ ಸಮಾಧಾನವಾಯಿತು.

ಪ್ರ. ೩ ನೇ ಜೋರ್ಜೆಂಬವನು ಯಾವಾಗ ಸತ್ತನು?

ಉ. ೧೮೨೦ ನೇ ಇಸವಿಯಲ್ಲಿಯೂ ತಂನ ಪ್ರಾಯದ ೮೨ ನೆಯದರಲ್ಲಿಯೂ ಸತ್ತನು; ಅವನು ೬೦ ವರುಷ ಆಳಿದನು.

ಪ್ರ. ಇವನ ಗುಣ ಎಂಥದ್ದಾಗಿತ್ತು?

ಉ. ಇವನು ಕೊಂಚ ಸಾಮರ್ಥ್ಯವುಳ್ಳವನೂ ತಂನ

ಒಳಗಿನ ನಡತೆಯಲ್ಲಿ ನೀತಿವಂತನೂ, ಆದರೆ ಕಥೋಲಿಕ್ ವೇದಸ್ತರಿಗೆ ಬರಿ ವಿರೋಧಿಯೂ ಆಗಿದ್ದನು.

## ೪ ನೇ ಜೋರ್ಜ್. (George IV.)

### (A. D. ೧೮೨೦—೧೮೩೦)

ಪ್ರ. ೪ ನೇ ಜೋರ್ಜೆಂಬವನ ರಾಜ್ಯಭಾರದಲ್ಲಿ ಆದಂಥಾ ಮುಖ್ಯ ಸಂಗತಿಗಳು ಯಾವವು?

ಉ. ೧ ನೇದು. ಮಂತ್ರಿಗಳಿಗೆ ವಿರೋಧವಾಗಿ ಆದಂಥಾ ಸಂಚು; ೨ ನೇದು. ರಾಯನಿಗೂ ರಾಣಿಗೂ ನಡೆದಂಥಾ ವ್ಯವಹಾರವು; ೩ ನೇದು. ಗ್ರೀಕರಿಗೆ (Greeks) ಸಹಾಯವಾಗಿ ಆದಂಥಾ ಜಗಳವು; ೪ ನೇದು. ಕಥೋಲಿಕರಿಗೆ ಕೊಡಲ್ಪಟ್ಟ ಬಿಡುಗಡೆಯು. (ರಿಲೀಫ್ ಬಿಲ್, Relief Bill.)

ಪ್ರ. ಮೊದಲು ನಡೆದ ಆ ಸಂಚು ಏನು?

ಉ. ಥಿಸಲ್ವೂಡ್ (Thistlewood) ಎಂಬವನೂ ಇಂನೂ ಚೇರಿ ಕೆಲ ಮನುಷ್ಯರೂ ಧೊರೆಗಳ ಅಧಿಕಾರವಂನು ತೆಗೆಯ ಬೇಕೆಂದಪೇಕ್ಷಿಸಿ ಮಂತ್ರಿಗಳಂನು ಕೊಲೆ ಮಾಡ ಪ್ರಯತ್ನಿಸಿದ್ದರು.

ಪ್ರ. ಅವರಿಗೆ ನೇಮಿಸಲ್ಪಟ್ಟ ಶಿಕ್ಷೆಯಾವದು?

ಉ. ಥಿಸಲ್ವೂಡೆಂಬವನೂ ಇವನ ಪ್ರಧಾನ ಜತೆಗಾ

ರರೂ ಗಲ್ಲಿಗೆ ಹಾಕಲ್ಪಟ್ಟರು; ಕಡಿಮೆಯಾದ ಅಪರಾಧ ವುಳ್ಳಂಥಾವರು ಗಡಿ ದಾಟಿಸಲ್ಪಟ್ಟರು.

ಪ್ರ. ರಾಯನಿಗೂ ಇವನ ಸತಿಗೂ ಆದಂಥಾ ವ್ಯವಹಾರವು ಹ್ಯಾಗೆ ಬಂತು ?

ಉ. ಇಬ್ಬರ ಗುಣವು ಪ್ರತಿಕೂಲವಾಗಿದ್ದದರಿಂದ, ಕೆಲವು ಸಂವತ್ಸರಗಳಿಂದ ಪ್ರತ್ಯೇಕವಾಗಿ ಬದುಕುತ್ತಾ ಇದ್ದರು. ೧೮೧೬ ನೇ ಸಂವತ್ಸರದಲ್ಲಿ ಕರೋಲೈನ್ (Caroline) ಎಂಬ ಆ ರಾಣಿಯು ಯುರೋಪ್ ಖಂಡದಲ್ಲಿ ಪ್ರಯಾಣ ಮಾಡ ರಾಯನಿಂದ ಅಪ್ಪಣೆ ಹೊಂದಿದಳು. ಆ ಪ್ರಯಾಣದಲ್ಲಿ ಇವಳ ಕೀರ್ತಿಗೆ ಹೊಂದದಂಥಾ ಪುಕಾರವು ಆದದ್ದರಿಂದ, ಇವಳು ೧೮೨೦ ನೇ ಸಂವತ್ಸರದಲ್ಲಿ ಲೊಂಡನ್ ಪಟ್ಟಣಕ್ಕೆ ಬರುವಾಗ, ರಾಯನು ಅವಳನ್ನು ಸೇರಿಸಿಕೊಳ್ಳಲೊಲ್ಲದೆ ಹೋದನು.

ಪ್ರ. ಆಗ ಏನು ಸಂಭವಿಸಿತು ?

ಉ. ಪಾರ್ಲಮೆಂತಿನವರು ರಾಣಿಯ ಮೇಲಿದ್ದ ಫಿರ್ಯಾದಿಯನ್ನು ಶೋಧಿಸಿದ ತರುವಾಯ, ಈಕೆಯಲ್ಲಿ ಸಾದೃಷ್ಟವಾದ ತಪ್ಪು ಕಾಣಸದೆ ಇದ್ದದರಿಂದ, ಫಿರ್ಯಾದಿ ರದ್ದು ಮಾಡಿದರು. ಆದಾಗ್ಯೂ ಮಾರನೇ ಸಂವತ್ಸರದಲ್ಲಿ (೧೮೨೧), ರಾಯನು ರಾಜಾಭಿಷೇಕ ಹೊಂದುವಂಥಾ ದಿನದಲ್ಲಿ, ಆ ಸಾಂಗ್ಯಕ್ಕೆ ರಾಣಿಯು ಬಾರದ ಹಾಗೆ ಆಟಂಕಿಸಿದನು; ಆದ್ದರಿಂದ ಅವಳು ನಾಚಿಕೆಯಿಂದಲೂ ದುಃಖದಿಂದಲೂ ಸತ್ತಳು.

ಪ್ರ. ಗ್ರೀಸ್ (Greece) ಸೀಮೆಯಲ್ಲಿ ಏನು ಜಗಳವಾಯಿತು?

ಉ. ತುರುಕರು (Turks) ಗ್ರೀಕ್ ಕ್ರೀಸ್ತುವರನ್ನು ನಿರ್ಮೂಲ ಮಾಡ ಪ್ರಯಾಸ ಪಡಲಾಗಿ, ಮೊದಲು ಗ್ರೀಕರು ಧೈರ್ಯವಾಗಿ ಹೋರಾಡಿದರು. ಆದರೆ, ತುರುಕರೂ ಏಜಿಪ್ತಿಯರೂ (Egyptians) ಕೂಡಿದ್ದರಿಂದ ಗ್ರೀಕರಿಗೆ ಶಕ್ತಿ ಸಾಲದೆ ಕುಂಗ ಬೇಕಾಗಿತ್ತು. ಅಂಥಾ ವೇಳೆಯಲ್ಲಿ ಫ್ರಾನ್ಸ್, ಇಂಗ್ಲಾಂಡ್, ರಶ್ಯ, ಈ ಮೂರು ಸೀಮೆಗಳವರು ಒಡಂಬಡಿಕೆ ಮಾಡಿ ಹಡಗ ಏರಿ, ನವರೀನೊ (Navarino) ಎಂಬ ಸ್ಥಳದ ಹತ್ತರ್ಕೆ ತುರುಕರನ್ನು ಜಯಿಸಿ, ಅವರ ಹಡಗಗಳನ್ನು ಮುರಿಸಿದ್ದರಿಂದ, ಗ್ರೀಕರಿಗೆ ಸ್ವತಂತ್ರವೂ ಸ್ವಧೀನತನವೂ ಸಂಪ್ರಾಪ್ತಿಸಿತು. (ಒಕ್ತೋಬರ್, ೧೮೨೭.)

ಪ್ರ. ಕಥೋಲಿಕರಿಗೆ ಈ ರಾಜ್ಯಭಾರದಲ್ಲಿ ಕೊಂಚ ಉಪಶಮನವಾಯಿತೋ?

ಉ. ಹೌದು; ದಾನಿಯೆಲ್ ಒ ಕೊನೆಲ್ (Daniel O' Connell) ಎಂಬ ಒಬ್ಬ ಪ್ರಸಂಗಿಯವನ ವಾಗ್ಧೋರಣೆಯಿಂದಲೂ ಸಾಮರ್ಥ್ಯದಿಂದಲೂ ಪಾರ್ಲಮೆಂತಿನವರು ತೀರ್ಪು ಮಾಡಿದ್ದೇನೆಂದರೆ: ಇಂನೂ ಮುಂದೆ ಕಥೋಲಿಕ್ ಧೊರೆಗಳು ತೆಸ್ತ್ (Test) ಎಂಬ ಸತ್ಯ ಪ್ರಮಾಣವನ್ನು ರಾಯನ ಜ್ಞಾನ ಅಧಿಕಾರದ ವಿಷಯದಲ್ಲಿ ಕೊಡಲಗತ್ಯವಿಲ್ಲ ಎಂಬದಾಗಿಯೂ, ಪಾರ್ಲಮೆಂತಿನಲ್ಲಿ ಮಿಕ್ಕ

వర హాగె శేర బరుదెంబదాగియూ, తీర్పు మాడిదరు. ( ೧೮೨೯ )

ప్ర. ఆ కాలదల్లి యారు మంత్రిగళాగిద్దరు ?

ఉ. వెలింగ్టన్ ఎంబ ప్రధానియూ, రోబెర్ట్ పీల్ (Peel) ఎంబ ధోరెయూ, ఇవరే.

ప్ర. నపోలియన్ ఎంబవను ఎల్లియూ యావ ఇసవియల్లియూ సత్తను ?

ఉ. ఆఫ్రిక (Africa) ఖండక్కె శేరిద సెంటెలేన ఎంబ ద్వీపదల్లి దేశాంతరవాగి సత్తను. ( ೧೮೨೧.) ఇవనిగె ఒబ్బ కుమారను మాత్రవిద్దను. ఆ కుమారను ೧೮೧೧ నే వర్ష హుట్టి, ೧೮೧೫ నే వర్ష ೨ నే నపోలియనెంబ హెసరినల్లి, సెనేట్ (Senate) ఎంబ సభెయింద రాయనాగి అంగీకరిసల్పట్టను. ఆదరె, రాజ్యభారవ మాడదె, ೧೮೩೨ నే ఇసవి సత్తను.

ప్ర. ೪ నే జోర్జెంబ రాయను యావాగ సత్తను ?

ఉ. జూన్ తింగళ ೨೬ నే తారీఖినల్లియూ తన్న ప్రాయద ೬೭ నే సంవత్సరదల్లియూ సత్తను. ( ೧೮೩೦ )

## ೪ನೇ ವಿಲ್ಯಂ. (William IV.) (೧೮೩೦ — ೧೮೩೭)

---

ಪ್ರ. ೪ನೇ ಜಾರ್ಜೆಂಬವನಿಗೆ ಬದಲಾದವನ್ಯಾರು?

ಉ. ಅವನ ತಮ್ಮನಾಗಿಯೂ ಕ್ಲಾರೆನ್ಸೆಂಬ ಪಾಳ್ಯಗಾರನಾಗಿಯೂ ಇದ್ದ ವಿಲ್ಯಂ ಎಂಬವನೇ.

ಪ್ರ. ಇವನ ರಾಜ್ಯಭಾರದ ಕಾಲದೊಳಗೆ ಫ್ರಾನ್ಸ್ ಸೀಮೆಯ ದೌಲತ್ತು ಬದಲಾಯಿಸಲ್ಪಟ್ಟಿತೋ?

ಉ. ಹೌದು. ೧೮೩೦ ನೇ ಇಸವಿ, ಜುಲಾಯಿ ೨೭ ನೇ ತಾರೀಖಿನಲ್ಲಿ ಒಂದು ಕಲಹ ಉಂಟಾಗಿ, ೧೦ ನೇ ಚಾರ್ಲ್ಸೆಂಬ ರಾಯನು ಓಡಿಸಲ್ಪಟ್ಟನು; ಮತ್ತು ಇವನ ನೆಂಟನಾದ ಲುವಿಸ್ ಫಿಲಿಪ್ (Louis-Philippe) ಎಂಬವನು ಸಿಂಹಾಸನ ಏರಿದನು.

ಪ್ರ. ಆ ವೇಳೆಯಲ್ಲಿ ಇಂಗ್ಲಾಂಡ್ ಪ್ರಜೆಗಳು ಸಹಾ ಹಂಗಾಮು ಮಾಡಲಿಲ್ಲವೋ?

ಉ. ಹೌದು. ಪಾರ್ಲಮೆಂತಿನವರ ಕ್ರಮಗಳನ್ನು ತಿದ್ದುಪಾಟು ಮಾಡಬೇಕೆಂಬೇಳಿ, ಜನಗಳು ಮಂತ್ರಿಗೂ ರಾಯನಿಗೂ ವಿರೋಧವಾಗಿ ಕಲಹ ಎಬ್ಬಿಸಲೂ, ಡರ್ಬಿ ನೊತ್ತಿಂಘಂ, ಬ್ರಿಸ್ತೊಲ್ (Bristol), ಈ ಮೊದಲಾದ ಪಟ್ಣಗಳಲ್ಲಿ ಗುಬಾರು ಹುಟ್ಟಿಸಲೂ ತೊಡಗಿದರು; ಆದರೆ ರಾಯನ ದಂಡಿನವರು ಅವರನ್ನು ಅಣಗಿಸಿದರು. ಪಾರ್ಲಮೆಂತಿನ ವಿಷಯದಲ್ಲಿ ಇತರವಾದ ಕೆಲವು ಕ್ರಮಗಳು ಸ್ಥಾಪಿಸಲ್ಪಟ್ಟವು.

ಪ್ರ. ಇಂನೂ ಆ ರಾಜ್ಯಭಾರದಲ್ಲಿ ಆದಂಥಾ ಪ್ರಧಾನ ಸಂಗತಿ ಯಾವದು ?

ಉ. ಗುಲಾಮರನ್ನು ಆಫ್ರಿಕ ಸೀಮೆಯಿಂದ ಕೊಂಡು ತಾರದ ಹಾಗೂ, ಬ್ರಿತಿಷ್ (British) ದ್ವೀಪಗಳ್ಲಲಿ ಸೇವಿಸ ಮಾಡದ ಹಾಗೂ, ರಾಜ ಕಟ್ಟಳೆಯಾಯಿತು.

ಪ್ರ. ವಿಲ್ಯಂ ಎಂಬವನು ಯಾವಾಗ ಸತ್ತನು ?

ಉ. ೭೨ ಪ್ರಾಯದವನಾಗಿ, ತಂನ ರಾಜ್ಯಭಾರದ ೭ ನೇ ಸಂವತ್ಸರವಾದ ೧೮೩೭ನೇ ಇಸವಿಯಲ್ಲಿ ಸತ್ತನು. ಇವನು ಒಳ್ಳೇ ಗುಣಸ್ತನಾಗಿಯೂ ಆದರೆ ಅಲ್ಪ ವಿವೇಕವುಳ್ಳವನಾಗಿಯೂ ಇದ್ದನು.

## ವಿಕ್ತೋರಿಯ. (Victoria.) (೧೮೩೭.)

ಪ್ರ. ೪ ನೇ ವಿಲ್ಯಂ ಎಂಬವನಿಗೆ ಬದಲಾಗಿ ಆಳಿದವ ನ್ಯಾರು ?

ಉ. ಅವನಿಗೆ ಪುತ್ರಸಂತಾನವಿಲ್ಲದ ಕಾರಣ, ವಿಕ್ತೋರಿಯ ಎಂಬ ರಾಜಪುತ್ರಿಗೆ ಕಿರೀಟ ಸಂಪ್ರಾಪ್ತಿಸಿತು. ಇವಳು ಸತ್ತ ರಾಯನ ತಂಮನಾದ ಎದ್ವಾರ್ಡ್ ಎಂಬವನ ಕುಮಾರ್ತೆಯಾಗಿಯೂ ೩ ನೇ ಜೋರ್ಜೆಂಬವನ ಮೊಮ್ಮಗಳಾಗಿಯೂ ಇದ್ಧಾಳೆ.

ಪ್ರ. ಇವಳ ರಾಜ್ಯಭಾರದ ಕಾಲದಲ್ಲಿ ನಡೆದ ವಿಶೇಷವಾದ ಸಂಗತಿಗಳೇನು ?

ಉ. ಐರ್ಲಾಂಡ್ ಸೀಮೆಯ ದುರ್ಭಿಕ್ಷೆಯೂ, ಫ್ರಾನ್ಸ್ ಸೀಮೆಯಲ್ಲಿ ನಡೆದಂಥಾ ಕಲಹವೂ, ರಶ್ಯನರಿಗೆ ವಿರೋಧವಾದ ಜಗಳವೂ, ಇತಲಿ ಸೀಮೆಯ ಯುದ್ಧವೂ, ಹಿಂದು ಸೀಮೆಯ ಕಲಹವೂ, ಇವುಗಳೇ.

ಪ್ರ. ಐರ್ಲಾಂಡ್ ಸೀಮೆಯ ದುರ್ಭಿಕ್ಷೆಯ ವರ್ತಮಾನವು ಹ್ಯಾಗೆ ?

ಉ. ೧೮೪೫, — ೪೬, — ೪೭, ಸಂವತ್ಸರಗಳಲ್ಲಿ ಬೆಳೆಯು ಬಹು ಕೊರತೆಯಾದದ್ದರಿಂದಲೂ, ಪ್ರೊಟೆಸ್ತಾಂತರಾದ ಜಮೀನ್ದಾರರು ಒಕ್ಕಲಿಗರನು ಬಹು ನಿಷ್ಠುರವಾಗಿ ಬಾಧಿಸಿದದರಿಂದಲೂ, ಆ ನಿರ್ಭಾಗ್ಯವಾದ ದೇಶದಲ್ಲಿ ಅನೇಕರು ಕಂಗೆಟ್ಟು ಸತ್ತದ್ದಲ್ಲದೆ, ೨೦ ಲಕ್ಷ ಜನರು ಅಮೇರಿಕ, ಒಸ್ತ್ರೇಲಿಯ (Australia), ಈ ಮೊದಲಾದ ದೇಶಗಳಿಗೆ ಪರದೇಶಿಗಳಾಗಿ ಹೋಗ ಅಗತ್ಯವಾದದ್ದಾಯಿತು.

ಪ್ರ. ಫ್ರಾನ್ಸ್ ಸೀಮೆಯ ಕಲಹವು ಏನಾಯಿತು ?

ಉ. ಲುವಿಸ್ ಫಿಲಿಪೆಂಬ ರಾಯನು ತಾನು ಅನ್ಯಾಯವಾಗಿ ಸಂಪಾದಿಸಿದ ಸಿಂಹಾಸನದಿಂದ ಅವಮಾನದೊಂದಿಗೆ ಪ್ರಜೆಗಳಿಂದ ತಳ್ಳಲ್ಪಟ್ಟನು. (೧೮೪೮.) ಪ್ರಜೇ ಧೊರೆತನ ಆ ಕಾಲ ಮೊದಲ್ಗೊಂಡು ೩ ನೇ ನಪೋಲಿಯನನು ಆಳುವತನಕ ನೆಲೆಗೊಂಡಿತು. ಇವನು ತಂನ ಮಾವನೋಪಾದಿಯಲ್ಲಿ ತಂನ ಉಪಾಯದಿಂದಲೂ ಧೈರ್ಯದಿಂದಲೂ ಚಕ್ರವರ್ತಿಯೆಂಬ ಖಿತಾಬು ಸ್ವತಂತ್ರಿಸಿಕೊಂಡಾಗ, ಜನರ ಅನುಮತಿಯಿಂದ ಸಮಾಧಾನವಾಗಿ ಆಳಿದನು. (೧೮೫೨).

ಪ್ರ. ರಶ್ಯನ್ ಜಗಳಕ್ಕೆ ಏನು ಕಾರಣವಾಯಿತು ?

ಉ. ರಶ್ಯ ದೇಶಸ್ಥರು ತುರ್ಕೀ (Turkey) ರಾಜ್ಯವನ್ನು ಆಕ್ರಮಿಸ ನೋಡುತ್ತಾರೆಂತಲೂ, ಆ ಅಭಿಕ್ರಮಣೆಯಿಂದ ರಶ್ಯದವರಿಗೆ ಹೆಚ್ಚಾದ ಪರಾಕ್ರಮವಾದೀತು ಎಂತಲೂ ಫ್ರಾನ್ಸ್, ಇಂಗ್ಲಾಂಡ್, ದೇಶಗಳ ಅಧಿಪತಿಗಳು ಕಂಡು, ತಂಮೊಳಗೆ ಒಡಂಬಡಿಕೆ ಮಾಡಿ, ಕ್ರಿಮೆಯ (Crimea) ಅರ್ಧನ್ ದ್ವೀಪಕ್ಕೆ ದಂಡು ಕಳುಹಿಸಿ, ಆಲ್ಮ (Alma), ಇನ್ಕೆರ್ಮಾನ್ (Inkermann), ಸೇಬಾಸ್ತ್ರೊಪೊಲ್ (Sebastopol) ಎಂಬ ಸ್ಥಳಗಳಲ್ಲಿ ಜಯ ಹೊಂದಿದ್ದರಿಂದ, ಅವರು ಕೋರುವ ಮೇರೆಗೆ ರಶ್ಯನರು ಕೇಳಲಗತ್ಯವಾಯಿತು. (೧೮೫೬.)

ಪ್ರ. ಹಿಂದು ಸೀಮೆಯಲ್ಲಿ ಕಲಹ ಉಂಟಾದದ್ದು ಯಾಗೆ ?

ಉ. ಅನೇಕ ಸಂವತ್ಸರಗಳಿಂದ ಇಂಗ್ಲಿಷವರು ಹಿಂದು ಸೀಮೆಯಲ್ಲಿ ಅವಿವೇಕವಾಗಿ ಹಿಂದು ಶಿಪಾಯಿಗಳ ಲೆಖ್ಖವ ಹೆಚ್ಚಿಸಿ, ಸ್ವದೇಶಸ್ಥರ ದಂಡು ಕಡಿಮೆ ಮಾಡಿದ್ದರು. ಮನಸ್ಸಿನಲ್ಲಿ ಗುಪ್ತವಾದ ಕೋಪ ಹೊಂದಿದ್ದ ತುರುಕ ಬ್ರಾಹ್ಮಣ ಜಾತಿಯುಳ್ಳ ಶಿಪಾಯಿಗಳು, ತಕ್ಕ ಸಮಯ ನೋಡಿ, ೧೮೫೭ನೇ ಇಸವಿ, ಡೆಲ್ಲಿ (Delhi), ಲಕ್ನೋ (Lucknow), ದಿನಪೂರ್ (Dinapore), ಎಂಬ ಪಟ್ಣಗಳಲ್ಲಿ ದ್ರೋಹವಾಗಿ ಎದ್ದು, ವಿಲಾಯಿತಿ ಜನರನ್ನು ಸಂಹರಿಸ ತೊಡಗಿದರು. ಆದರೆ ಕಲಹಕಾರರೊಳಗೆ ತಕ್ಕ ಐಕ್ಯವು ಇಲ್ಲದ

ಕಾರಣ, ಇಂಗ್ಲಿಷರು ಸೀಮೆಯಿಂದ ಹೊಸ ದಂಡು ತರಿಸಲೂ ಕಲಹವಣಗಿಸಲೂ ಅವರಿಗೆ ಸಂದರ್ಭ ಸಿಕ್ಕಿತು. ಆ ಜಗಳಗಳಲ್ಲಿ ವಿಶೇಷ ಕೀರ್ತಿ ಹೊಂದಿದ ಸೇನಾಪತಿಗಳು ಔಟ್ರಾಂ (Outram), ಹೆವ್ಲಾಕ್ (Havelock) ಎಂಬವರೇ. (೧೮೫೭—೧೮೫೮.)

ಪ್ರ. ಇತಲಿ ಸೀಮೆಯಲ್ಲಿ ಏನು ಜಗಳವಾಯಿತು?

ಉ. ಮೊದಲು, ೧೮೫೯ ಇಸವಿಯಲ್ಲಿ, ವಿಶೇಷವಾದ ನಿಮಿತ್ತವು ಇಲ್ಲದೆ, ಇತಲಿಯವರಿಗೆ ಸ್ವತಂತ್ರ ಕೊಡ ಬೇಕೆಂಥೇಳಿ, ೩ ನೇ ನಪೋಲಿಯನ್ ಎಂಬವನು ಓಸ್ತ್ರಿಯ ದೇಶದವರಿಗೆ ಲೊಂಬಾರ್ಡಿ (Lombardy) ಎಂಬ ಇಲಾಖೆ ಅಪಹರಿಸಿ, ಪ್ಯೆದ್ಮೊಂತ್ ರಾಯನಿಗೆ ಕೊಟ್ಟು, ತನಗೆ ಸವೋಯಿ (Savoy) ನ್ಯೆಸ್ (Nice) ಎಂಬ ಜಿಲ್ಲಾಗಳನ್ನು ಉಳಿಸಿಕೊಂಡನು. ಇದಲ್ಲದೆ ಪ್ಯೆದ್ಮೊಂತ್ ರಾಯನು ಅತ್ಯಾಸೆಗೊಂಡು, ಇತಲಿ ಸೀಮೆಯ ಕಲಹಕಾರರನ್ನು ಸೇರಿಸಿಕೊಂಡು, ನೇಪ್ಲ್ಸ್ (Naples) ಎಂಬ ರಾಜ್ಯದಿಂದ ೨ ನೇ ಫ್ರಾನ್ಸಿಸ್ (Francis) ಎಂಬ ರಾಯನನ್ನು ಓಡಿಸಿದಲ್ಲದೆ, ಪಾಪುಸ್ವಾಮಿಯವರ ಇಲಾಖೆಗಳಲ್ಲಿ ಅನೇಕವುಗಳನ್ನು ಕಿತ್ತುಕೊಳ್ಳಲು, ಫ್ರೆಂಚ್ ಚಕ್ರವರ್ತಿ ಅದನ್ನು ಆಟಂಕಿಸದೆ ಇದ್ದದರಿಂದ ಹುಂಮಸು ಮಾಡಿದ ಹಾಗಾಯಿತು. ಆದಾಗ್ಯೂ ರೋಮಾಪುರಿಯಲ್ಲಿ ೮೦,೦೦೦ ದಂಡಿನವರನ್ನು ನಿಲ್ಲಿಸುವದರಿಂದ ಪಾಪು ಸ್ವಾಮಿಯವರನ್ನು ಆದರಿಸುತ್ತಾನೆ.

ಪ್ರ. ಇಂಗ್ಲಿಷ್ ರಾಣಿಯ ಕುಟುಂಬದ ಸ್ಥಿತಿಯು ಹ್ಯಾಗೆ?

ಉ. ಈಕೆಯು ಸಕ್ಸ್ (Saxe) ಎಂಬ ಸೀಮೆಯ ಪ್ರಧಾನಿಯಾದ ಅಲ್ಬೆರ್ಟ್ (Albert) ಎಂಬವನಂನು ಮದಿವೆ ಮಾಡಿಕೊಂಡು, ಅನೇಕ ಮಕ್ಕಳಂನು ಪಡೆದಿದ್ದಾಳೆ. ಇವರಲ್ಲಿ ರಾಜ್ಯಕ್ಕೆ ಬಾಧ್ಯನು ಯಾರೆಂದರೆ, ೧೮೪೧ ನೇ ಸಂವತ್ಸರದಲ್ಲಿ ಹುಟ್ಟಿದ ಅಲ್ಬೆರ್ಟ್ ಎದ್ವಾರ್ಡ್ ಎಂಬ ವೇಲ್ಸ್ ಪ್ರಧಾನಿಯೇ.— ರಾಣಿಯ ಪುರುಷನೋ ಅಂದರೆ, ೧೮೬೧ ನೇ ಇಸವಿಯಲ್ಲಿ ಸತ್ತು ಹೋದನು.

ಸಮಾಪ್ತಃ.

# ಗ್ರೇತ್ ಬ್ರಿತೆನ್ ದೇಶದ ರಾಯರುಗಳ ವಂಶಗಳ ಪಟ್ಟಿ.

| ಶಕ | ಹೆಸರು | ವಿವರ |
|---|---|---|
| ಜೇಸುನಾಥರಿಗೆ ಮುಂಚೆ ೯೮ ಸಂವತ್ಸರದಿಂದ ೪೬ ಸಂವತ್ಸರದವರೆಗೂ. | ಕಸಿಬೇಲನ್ (Cassibelan)<br>ಕರಕ್ತಕುಸ್ (Caractacus.)<br>. . . . . . . . . . | ಆ ಕಾಲದಲ್ಲಿದ್ದ ರಾಯರುಗಳ ನಾಮ, ವಂಶ, ಕ್ರಿಯೆ, ಪೂರ್ವೋತ್ತರಗಳನ್ನು ಕುರಿತು ಏನೂ ನಿಶ್ಚಯವಾಗಿ ತಿಳಿದಿರುವದಿಲ್ಲಾ. |
| ಕ್ರೀಸ್ತು ಶಕಕ್ಕೆ ಹಿಂದೆ, ೬೮ | . . . . . . . . .<br>ಕೊಯಿಲುಸ್ (Coïlus)<br>. . . . . . . . . | = ಕೊಯಿಲುಸ್ ಎಂಬ ರಾಯನಿಗೆ ಮುಂಚೆಯೂ ಹಿಂದೆಯೂ ಆಳಿದವರು ಯಾರೆಂತ ತಿಳಿಯದು. |
| ೧೩೮ | ಲೂಸಿಯುಸ್ (Lucius)<br>. . . . . . . . . | = ಇವನ ವಂಶಾವಳಿ ಸಹಾ ತಿಳಿಯದು. |
| ೪೨೦ | ಕೊನ್ಸ್ತಾನ್ಸ್ (Constans)<br>. . . . . . . . . | = ಹಿಂದಿನ ಮುಂದಿನ ರಾಯರು ಅರಿಯಲ್ಪಡರು. |
| ೪೪೯ | ವೊರ್ತಿಜೆರ್ನ್ (Vortigern) | = ಸಕ್ಸೊನ್ ಜಾತಿಯವರನ್ನು ಕರೆದವನು ಇವನೇ. |

೧ ನೇದು. ಸಕ್ಸೊನ್ ರಾಯರ ವಂಶವು. (SAXON DYNASTY.)

| ಶಕ | ಹೆಸರು | ವಿವರ |
|---|---|---|
| ೪೪೬ | (Hengist) ಹೆಂಜಿಸ್ತ್<br>. . . . . . . . .<br>. . . . . . . . . | ಗ್ರೇತ್ ಬ್ರಿತೆನ್ ಸಕ್ಸೊನರ ಕಾಲದಲ್ಲಿ ೭ ರಾಜ್ಯಗಳಲ್ಲಿ ವಿಭಾಗಿಸಲ್ಪಟ್ಟಿತು. |

| ಶಕ | ಹೆಸರು | ವಿವರ |
|---|---|---|
| | . . . . . . . . . | ಮತ್ತು ಒಂದೊಂದು ರಾಜ್ಯದಲ್ಲಿ ಬೇರೆ ಬೇರೆ ರಾಯರು ಆಳಿದರು. ಕಡೆಯಲ್ಲಿ, ಸುಮಾರು ೪೦೦ ಸಂವತ್ಸರಗಳು ಗತಿಸಿದ ತರುವಾಯ, ವೆಸೆಕ್ಸ ದೇಶದ ರಾಯನಾದ ಎ |
| ೮೨೭ | ಎಗ್ಬೆರ್ಟ (Egbert) | ಗ್ಬೆರ್ಟ ಎಂಬವನು ಆ |
| | . . . . . . . . . | ೭ ರಾಜ್ಯಗಳೆಲ್ಲಾ ತನ್ನ ವಶದಲ್ಲಿ ಸೇರಿಸಿಕೊಂಡನು. |
| ೮೫೭ | ಅಲ್ಫ್ರೆಡ (Alfred the Great.) | ಸಕ್ಸೊನ ರಾಯರ |
| ೯೦೦ | ಎಡ್ವಾರ್ಡ (Edward the Elder) | ವಂಶವು ಹೆಂಜಿಸ್ತ ಎಂ |
| ೯೨೪ | ಅಥೆಲ್ಸ್ತಾನ (Athelsthan) | ಬವನನ್ನು ಹಿಡಿದು ೨ |
| ೯೪೦ | ಎಡ್ಮೊಂಡ (Edmund) | ನೇ ಎಥೆಲ್ಬೆರ್ಟ ಎಂಬ |
| ೯೪೬ | ಎಡ್ರೆಡ (Edred) | ವನ ವರಿವಿಗೂ ೫೩೦ |
| ೯೫೫ | ಎಡ್ವಿ (Edwy) | ಸಂವತ್ಸರಗಳಂನು ಅಂ |
| ೯೫೯ | ಎಡ್ಗಾರ (Edgar) | ತಭೀಸುತ್ತದೆ. |
| ೯೭೫ | ಎಡ್ವಾರ್ಡ (Edward the Martyr) | |
| ೯೭೯ | ಎಥೆಲ್ರೆಡ (Ethelred) | |
| | ಡೇನ ಜಾತಿಯುಳ್ಳ ಸ್ವೇನ (Sweyn) | ಅದರ್ಕೆ ಬದಲಾಗಿ ಡೇನ ವಂಶವು ಗೇತ ಜಿತೆನಿನಲ್ಲಿ ಆಳಿಯಿತು. |

## ೨ನೇದು. ಡೇನ ರಾಯರುಗಳ ವಂಶವು. (DANISH DYNASTY.)

| ಶಕ | ಹೆಸರು | ವಿವರ |
|---|---|---|
| ೧೦೧೩ | ಸ್ವೇನ (Sweyn) | ಈ ವಂಶವು ೫ ರಾಯ |
| ೧೦೧೬ | ಕನ್ಯೂತ (Canute the Great) | ರಿಂದ ಉಂಟಾಗುತ್ತೆ. |

| ಶಕ | ಹೆಸರು | ವಿವರ |
|---|---|---|
| ೧೦೩೬<br>೧೦೪೦ | ಹರೊಲ್ಡ್ — ಹರ್ಡಿಕನ್ಯೂಟ್ (Harold) (Hardi Canute) | ೫೧ ಸಂವತ್ಸರಗಳ ಮಟ್ಟಿಗೂ ನೆಲೆಗೊಂಡಿತು. |
| ೧೦೪೨ | ಸ್ತುತಿಯುರಾದ ಎಡ್ವರ್ಡ್ (Edward the Confessor) | = ಇವರು ಸಕ್ಸೋನ್ ವಂಶದ ಕಡೇ ರಾಯರಾಗಿದ್ದರು. |
| ೧೦೬೬ | ೨ ನೇ ಹರೊಲ್ಡ್ (Harold II) | = ಇವನು ಡೇನ್ ಜಾತಿಯ ಕಡೇ ರಾಯನೇ. |

### ೩ ನೇದು. ನೋರ್ಮನ್ ರಾಯರುಗಳ ವಂಶವು.
### (NORMAN DYNASTY.)

(ಈ ಮೂರನೇ ವಂಶವು ೪೧೯ ವರುಷದ ಮಟ್ಟಿಗೂ ನೆಲೆಗೊಂಡಿತು. [೧೦೬೬—೧೪೮೫.] ೧೯ ರಾಯರಿಂದ ಉಂಟಾಗುತ್ತದೆ.)

| ಶಕ | ಹೆಸರು | ವಿವರ |
|---|---|---|
| ೧೦೬೬ | ಜಯವಂತನಾದ ವಿಲ್ಯಂ (William the Conqueror)<br>‖ | |
| ೧೦೮೭ | ಕೆಂಪು ವಿಲ್ಯಂ (William Rufus) | |
| ೧೧೦೦ | ೧ನೇ ಹೆನ್ರಿ (Henry Beauclerc)<br>‖ | = ಕೆಂಪಿನವನ ಸಹೋದರನಾಗಿದ್ದನು. |
| ೧೧೩೨ | ಸ್ಟೀವನ್, ಮತ್ತು ಮಥಿಲ್ಡ (Stephen—Mathilda)<br>‖ | = ಸ್ಟೀವನ್ ಜಯವಂತನಾದ ವಿಲ್ಯಮನ ಅಳಿಯನಾಗಿದ್ದನು. - ಮಥಿಲ್ಡಳು ೧ ನೇ ಹೆನ್ರಿಯವನ ಕುಮಾರಿಯು. |
| ೧೧೫೪ | ೨ ನೇ ಹೆನ್ರಿ (Henry II)<br>‖ | |
| ೧೧೮೯ | ೧ ನೇ ರಿಚರ್ಡ್ (Richard Lion-Hearted) | |
| ೧೧೯೯ | ೧ನೇ ಜೋನ್ (John Lack-land)<br>‖ | = ರಿಚರ್ಡನ ತಮ್ಮನಾಗಿದ್ದನು. |

| ಶಕ | ಹೆಸರು | ವಿವರ |
|---|---|---|
| ೧೨೧೬ | ೩ ನೇ ಹೆಂಱಿ (Henry III) | |
| ೧೨೭೨ | ೧ ನೇ ಎಡ್ವಾಡ್ಱ (Edward I) | |
| ೧೩೦೭ | ೨ ನೇ ಎಡ್ವಾಡ್ಱ (Edward II) | |
| ೧೩೨೭ | ೩ ನೇ ಎಡ್ವಾಡ್ಱ (Edward III) | |
| ೧೩೭೭ | ೨ ನೇ ರಿಚಡ್ಱ (Richard II) | =ವೇಲ್ಸ್ ಪ್ರಧಾನಿಯ ಮಗನಾಗಿಯೂ ೩ ನೇ ಎಡ್ವಾದಱನ ಮೊಮ್ಮಗನಾಗಿಯೂ ಇದ್ದನು. |
| ೧೩೯೯ | ೪ ನೇ ಹೆಂಱಿ (Henry IV) | =ಜೋಱ ಲಂಕಾಸ್ತರಿಂಬವನ ಮಗನಾಗಿಯೂ ೩ ನೇ ಎಡ್ವಾದಱನ ಮೊಮ್ಮಗನಾಗಿಯೂ ಇದ್ದನು. |
| ೧೪೧೩ | ೫ ನೇ ಹೆಂಱಿ (Henry V) | |
| ೧೪೨೨ | ೬ ನೇ ಹೆಂಱಿ (Henry VI) | |
| ೧೪೬೧ | ೪ ನೇ ಎಡ್ವಾಡ್ಱ (Edward IV) | =ಇವನು ಎಡ್ಮೋಂಡ್ ಒವ್ ಯೋರ್ಕ್ಱ ಎಂಬವನ ಮೂಲವಾಗಿ, ೩ ನೇ ಎಡ್ವಾದಿಱಗೆ ೪ ನೇ ವಂಶೀಱಯ ನೆಂಟನಾಗಿದ್ದನು. |
| ೧೪೮೩ | ೫ ನೇ ಎಡ್ವಾಡ್ಱ (Edward V) | |
| ೧೪೮೩ | ೩ ನೇ ರಿಚಡ್ಱ (Richard III) | =ಇವನು ೪ ನೇ ಎಡ್ವಾದಱನ ತಮ್ಮನಾಗಿದ್ದನು. |

| ಶಕ | ಹೆಸರು | ವಿವರ |
|---|---|---|

೪ ನೇದು. ಟ್ಯುಡೊರ್ ವಂಶವು. (TUDOR DYNASTY.)
(ಈ ವಂಶದಲ್ಲಿ ೫ ರಾಯರಿದ್ದರು. ಅದು ೧೧೭ ಸಂವತ್ಸರ ನೆಲೆಗೊಂಡಿತು.)

| ಶಕ | ಹೆಸರು | ವಿವರ |
|---|---|---|
| ೧೪೮೫ | ೭ ನೇ ಹೆನ್ರಿ (Henry VII) ‖ | =ಇವನ ತಾತನು ಟ್ಯುಡೊರ್ ಎಂಬವನೇ; ತಾಯ್ಯ ಕಡೆಯಿಂದ ೩ ನೇ ಎಡ್ವರ್ಡ್‌ಗೆ ನೆಂಟನಾಗಿದ್ದನು. |
| ೧೫೦೯ | ೮ ನೇ ಹೆನ್ರಿ (Henry VIII) ‖ | |
| ೧೫೪೭ | ೬ ನೇ ಎಡ್ವರ್ಡ್ (Edward VI) | =ಜೇನ್ ಸೀಮೊರೆಂಬವಳ ಮಗನಾಗಿದ್ದನು. |
| ೧೫೫೩ | ಮೇರಿ (Mary) | =ಈಕೆಯು ಕಥರಿನ್ ರಾಣಿಯ ಮಗಳೇ. |
| ೧೫೫೮ | ಎಲಿಸಬೆಥ್ (Elizabeth) | =ಇವಳು ಅನ್ನಾ ಬೊಲೇನ್ ಎಂಬ ಸೂಳೆಯ ಮಗಳೇ. |

೫ ನೇದು. ಸ್ಟ್ಯುವರ್ಟ್ ವಂಶವು. (STUART DYNASTY.)
(ಸ್ಟ್ಯುವರ್ಟ್ ವಂಶವು ೧೧೧ ವರುಷ ಆಳಿತು; ೬ ರಾಯರುಳ್ಳದಾಗಿಥೆ.)

| ಶಕ | ಹೆಸರು | ವಿವರ |
|---|---|---|
| ೧೬೦೩ | ೧ ನೇ ಜೇಂಸ್ (James I) ‖ | =೧ ನೇ ಜೇಂಸೆಂಬವನ ಮಾತೆಯಾದ ಮೇರಿ ಸ್ಟ್ಯುವರ್ಟೆಂಬವಳು ೭ ನೇ ಹೆನ್ರಿ ಎಂಬವನ ಮರಿಮಗಳಾಗಿ ಇದ್ದಳು. |
| ೧೬೨೫ | ೧ ನೇ ಚಾರ್ಲ್ಸ್ (Charles I) ‖ | |
| ೧೬೬೦ | ೨ ನೇ ಚಾರ್ಲ್ಸ್ (Charles II | |
| ೧೬೮೫ | ೨ ನೇ ಜೇಂಸ್ (James II) ‖ | =ಈತನು ೧ನೇ ಚಾರ್ಲ್ಸೆಂಬವನ ಕಿರಿಮಗನು. |

| ಶಕ | ಹೆಸರು | ವಿವರ |
|---|---|---|
| ೧೬೮೮ | ಮೇರಿ (Mary) ಮತ್ತು ೩ ನೇ ವಿಲ್ಯಂ (William III) | =ಇವನು ೨ ನೇ ಜೇಂಸನ ಸೋದರಳಿಯನಾಗಿದ್ದಲ್ಲದೆ, ಆತನ ಮಗಳಾದ ಮೇರಿ ಎಂಬವಳನ್ನು ಮದಿವೆ ಮಾಡಿಕೊಂಡಿದ್ದನು. |
| ೧೭೦೨ | ಅನ್ನ (Anne) | =ಇವಳು ೨ ನೇ ಜೇಂಸನ ಹಿರಿಮಗಳಾಗಿದ್ದಳು. ಇತನ ಕುಮಾರನಾದ ೩ನೇ ಜೇಂಸನಿಗೂ ಮೊಮ್ಮಗನಾದ ಚಾರ್ಲ್ಸ್ ಎಡ್ವಾರ್ಡಿಗೂ ರಾಜ್ಯಭಾರ ತಪ್ಪಿತು. |

೬ ನೇದು. ಬ್ರನ್ಸ್ವಿಕ್ ವಂಶವು. (BRUNSWICK.)

| ಶಕ | ಹೆಸರು | ವಿವರ |
|---|---|---|
| ೧೭೧೪ | ೧ ನೇ ಜೋರ್ಜ್ (George I) ‖ | =ಇವನು ೨ನೇ ಹೆನ್ರಿಯ ದೂರ ನೆಂಟಸ್ಥನಾಗಿದ್ದನು. |
| ೧೭೨೭ | ೨ ನೇ ಜೋರ್ಜ್ (George II) ‖ | |
| ೧೭೬೦ | ೩ ನೇ ಜೋರ್ಜ್ (George III) ‖ | =ಇವನು ಮುಂದಿನ ರಾಯನ ಮೊಮ್ಮಗನು. |
| ೧೮೨೦ | ೪ ನೇ ಜೋರ್ಜ್ (George IV) | |
| ೧೮೩೦ | ೪ ನೇ ವಿಲ್ಯಂ (William IV) | =ಇವನು ಮುಂದಿನ ರಾಯನ ತಮ್ಮನು. |

| ಶಕ | ಹೆಸರು. | ವಿವರ |
|---|---|---|
| ೧೮೩೭ | ವಿಕ್ಟೋರಿಯ ( Victoria ) | —ಇವಳು ಎದ್ವಾರ್ಡೆಂಬ ತಂನ ತಂದೆಯ ಕಡೆಯಿಂದ 3 ನೇ ಜಾರ್ಜೆಂಬವನ ಮೊಂಮಗಳಾಗಿ ಇದ್ದಾಳೆ. |

## ಇಂಗ್ಲಾಂಡ್ ಸೀಮೆಯ ಚರಿತ್ರೆಗೆ ಸಂಬಂಧವಾದ ವಿವರಗಳು.

(ಮತ ವಿಭಾಗದ ಪ್ರಾರಂಭದಲ್ಲಿ ಪ್ರಸಿದ್ಧರಾದಂಥ ಕೆಲ ಮಂದಿಗಳ ಚರಿತ್ರೆಯಂನು ಅಧಿಕವಾಗಿ ವಿವರಿಸುವದು ಪ್ರಯೋಜನವೆಂಥೇಳಿ, ಇಲ್ಲಿ ಬರೆದಿರಿಸಿದ್ದೇವೆ.)

### ಲೂಥೆರೆಂಬವನು. (LUTHER.)

ಮಾರ್ತಿನ್ ಲೂಥೆರೆಂಬವನು ಮೊದಲನೆಯವನಾಗಿ ೧೫೨೦ ನೇ ವರುಷದಲ್ಲಿ ಅಚ್ಯರ್. ಪಾಪು ಸ್ವಾಮಿಯವರಿಗೆ ಎದುರಿಸಲೂ ಕಳ್ಳ ಬೋಧನೆಯಂನು ಬೋಧಿಸಲೂ ಪ್ರಾರಂಭಿಸಿದನು. ಅವನು ಮತ ಭ್ರಷ್ಟನಾದ ಸನ್ಯಾಸಿಯಾಗಿಯೂ ದ್ರೋಹಿಯಾದ ಗುರುವಾಗಿಯೂ ಇದ್ದದ್ದೇ ಕಿಂಾತುರ್ ಮತ್ತೊಂದಲ್ಲವು. ಒಬ್ಬ ಕನ್ಯಾಸ್ತ್ರೀಯಂನು ಮಠದಿಂದ ಕರೆತಂದು (*a*), ಅವಳಂನು ತನಗೆ ಸೂಳೆಯಾಗಿ ಇಟ್ಟುಕೊಂಡನು. ಅಳವಡಿಸಕೂಡದ ಗರ್ವದಿಂದ ಭರಿತನಾಗಿ ತಿರು ಸಭೆಯಂನು ತಿದ್ದುಪಾಟು ಮಾಡಲಿಕ್ಕಾಗಿ ಜೇಸುನಾಥರಿಂದ ಕಳುಹಿಸಲ್ಪಟ್ಟಿದ್ದೇನೆಂದೂ (*b*), ಸಕಲ ವಿದ್ವಾಂಸರಿಗಿಂತಾ ವೇದಾಗಮದ ಅರ್ಥವಂನು ಅಧಿಕ ಚಂನಾಗಿ ಕಂಡುಕೊಳ್ಳುತ್ತೇನೆಂದೂ (*c*), ಜಂಭ ಮಾಡಿದಾಗ್ಯೂ, ಅವನು ಏಕವಾದ ಒಂದು ಬೋಧನೆಯಲ್ಲಿ ನಿಲ್ಲದೆ, ತಂನ ಜೀವದ ಕಾಲದಲ್ಲಿ ನಾನಾವರ್ತಿ ತನಗೆ ತಾನೇ ವಿರೋಧವಾದನೆಂದು ನಿಶ್ಚಯವಾಗಿದೆ (*d*). ಯಾರಾದರೂ ಅವನಿಗೆ ಬುದ್ಧಿ ಕೇಳಿದರೆ, ರಾಯನೆಂದೂ ಗುರುವೆಂದೂ ಸಡ್ಡೆ ಮಾಡದೆ, ಕತ್ತೆ, ಬೇಟೆನಾಯಿ, ಹಂದಿ, ಎಂದು ಬೈದು ಅವರಂನು ದೂಷಿಸುವದಲ್ಲದೆ (*e*), ಬೇರೆ ಬೇರೆ ಸಮಯದಲ್ಲಿ ಕೋಪದಿಂದಲಾದರೂ ಹಾಸ್ಯದಿಂದಲಾದರೂ ಮರ್ಯಾದೆಗೂ ವಿರಕ್ತತ್ವಕ್ಕೂ ದೇವರ ವಿನಯಾಚಾರಕ್ಕೂ ವಿರೋಧವಾದ ಲಜ್ಜೆಯಿಲ್ಲದ ಮಾತುಗಳಂನು ನುಡಿಯಲಭ್ಯಾಸವಾಗಿದ್ದನು (*f*). ಭೋಜನದಲ್ಲಿಯೂ ಪಾನದಲ್ಲಿಯೂ ಕಡಮೆಯಂನೂ ಉಪವಾಸವಂ

(*a*) Catherine de Bore. (*b*) Ep. ad ord. Episc. t. II. p. 305. (*c*) Ad mal. Reg. Angl. t. II. 498. (*d*) Audin, II. 413. (*e*) Henri VIII, Leo X, Paul III, Erasmus, etc. (*f*) Vid. Tisch Reden. passim.

ನೂ ತಾಳಲಾರದೆ, ಕುಡಿಯುವ ಅಂಗಡಿಯಲ್ಲಿ (a) ದಿನಂಪ್ರತಿ ಕೂತು ಕೊಂಡು, ಮದ್ಯಪಾನ ಕುಡಿದು, ಪಿಶಾಚಿಯನ್ನು ಜಯಿಸುವದಕ್ಕೆ ದ್ರಾಕ್ಷೀ ರಸವೇ ಉತ್ತಮವಾದ ಉಪಾಯವೆಂದು ಬೋಧಿಸುತ್ತಾ ಇದ್ದನು (b). ವೇದಾಗಮಕ್ಕೆ ವಿರೋಧವಾಗಿ ಪ್ರಭುಗಳ ಮೇಲೆ ಪ್ರಜೆಗಳಂನು ಎಬ್ಬಿಸಿ, ಸ್ವಾಬಿಯ (Suabia) ಸೀಮೆಯ ಕ್ರೈಸ್ತರು ಧೊರೆಗಳಿಗೆ ಜಗಳ ಮಾಡುವ ಹಾಗೆ ಪ್ರೇರೇಪಿಸಿದನು (c). ತಾನು ಪಿಶಾಚಿಯಿಂದ ಹಿಡಿಯಲ್ಪಟ್ಟವನಾಗಿದ್ಧೇನಂದುಕೊಂಡು, ಅದಂನು ಹೊರಡಿಸುವದಕ್ಕೆ ಹೇಳಕೂಡದಂಥಾ ಉಪಾಯಗಳಂನು ಮಾಡುತ್ತಿದ್ದನು. ತಾನು ಸೂಳೆಯಾಗಿ ಇಟ್ಟುಕೊಂಡ ಕಥರಿನೆಂಬವಳು ಮದಿವೆಯಾದಂಥ ದಿವಸದಲ್ಲಿ ಪ್ರಸೂತಿಯಾದಳೆಂದೂ, ಬೇರೆಯವಳೊಂದಿಗೆ ಸಹಾ ಲೂಥೆರೆಂಬವನು ತಾರುಮಾರು ನಡಿಸಿದನೆಂದೂ, ವಿದ್ವಾಂಸರ ಪುಸ್ತಕಗಳಲ್ಲಿ ಸಾದೃಷ್ಟವಾಗಿಧೆ (d). ಅವನೂ ಅವನ ಜೊತೆಗಾರರಾದ ಬ್ಯುಸೆರ್ (Bucer) ಮೆಲಂಕ್ಥೋನ್ (Melancthon) ಎಂಬಂಥವರೂ, ದೇವಕಟ್ಟಳೆಗೆ ವಿರೋಧವಾಗಿ, ೧೫೩೯ ನೇ ವರುಷದಲ್ಲಿ, ಹೆಸ್ಸಿಯ (Hessia) ಸೀಮೆಯ ಪಾಳ್ಯಗಾರನಾದ ಫಿಲಿಪೆಂಬವನಿಗೆ, ತಂನ ಮೊದಲನೇ ಹೆಂಡತಿಯು ಜೀವಿಸುತ್ತಿರುವಾಗ, ಬೇರೊಬ್ಬಳಂನು ಲಗ್ನ ಮಾಡಿಕೊಳ್ಳ ಬಹುದೆಂದು ಅಪ್ಪಣೆಯನ್ನು ಕೊಟ್ಟರು. ಲೂಥೆರೆಂಬವನು ವ್ಯಾಧಿಯುಳ್ಳದಾಗ, ಹೆಚ್ಚಾಗಿ ಊಟ ಮಾಡಿ ಕುಡಿದದರಿಂದ (e), ಕೆಲವು ದಿವಸದೊಳಗೆ ಸತ್ತುಹೋದನು.

---

## ೮ ನೇ ಹೇನ್ರಿ. (HENRI VIII.)

ಇಂಗ್ಲಾಂಡ್ ದೇಶದ ರಾಯನಾದ ಎಂಟನೇ ಹೇನ್ರಿ ಎಂಬವನು ಅರಗೋನ್ (Arragon) ಎಂಬ ದೇಶದವಳಾದ ಕಥರಿನ್ ಎಂಬವಳಂನು ಮದಿವೆ ಮಾಡಿಕೊಂಡು, ಅವಳಿಂದ ಐದು ಮಂದಿ ಮಕ್ಕಳಂನು ಪಡೆದನು (f). ಆಬಳಿಕ ಬೇರೆ ಸ್ತ್ರೀಯರ ಮೇಲೆ ದುರಾಶೆ ಪಟ್ಟು, ಮೊದಲ್ಮೊದಲು ಮೇರಿ ಬೊಲೇನ್ (Mary Boleyn) ಎಂಬವಳೊಂದಿಗೆ ವ್ಯಭಿಚಾರ ಮಾಡಿ (g), ಮತ್ತು ಇವಳ ತಂಗಿಯಾದ ಅನ್ನಾಬೊಲೇನ್ (Anna Boleyn) ಎಂಬ

---

(a) Audin, II.p. 309. (b) Ep. ad Weller, apud Wette. (c) Osiander, Menno Simon, Erasmus. (d) Odoric Raynald, Graveson, Jean Faber, Erasmus, etc. (e) Seckendorf. (f) Rorhbacher, t. XXV. p. 370. (g) Sander.

ವಳನ್ನು ಇಟ್ಟುಕೊಳ್ಳುವದಕ್ಕಾಗಿ ಆಲೋಚನೆ ಮಾಡಿ, ತಂನ ನ್ಯಾಯವಾದ ಸತಿಯಂನು ಪರಿತ್ಯಾಗ ಮಾಡುವದಕ್ಕಾಗಿ ಏಳನೇ ಕ್ಲೆಮೆಂಟ್ (ClementVII) ಎಂಬ ಪಾಪುಸ್ವಾಮಿಯವರ ಬಳಿಯಲ್ಲಿ ಅಂಥ ಅಪ್ಪಣೆಯಂನು ಕೇಳಿಕೊಂಡನು (*a*). ಪಾಪುಸ್ವಾಮಿಯವರು ಈ ಅಪ್ಪಣೆಯಂನು ಪಾಲಿಸ ಕೂಡದೆ ಇದ್ದದರಿಂದ ತಾಮಸ ಮಾಡಲಾಗಿ, ಹೆನ್ರಿ ಎಂಬವನು ಇಂಥಾ ತಾಮಸವನ್ನು ತಾಳಲಾರದೆ, ಅನ್ನಾ ಎಂಬವಳೊಂದಿಗೆ ರಹಸ್ಯವಾಗಿ ಮದುವೆ ಮಾಡಿಕೊಂಡನು. ಆಗ ಪಾಪುಸ್ವಾಮಿಯವರು ಇದಂನು ತಿಳಿದು, ರಾಯನು ತಂನ ನ್ಯಾಯವಾದ ಹೆಂಡತಿಯನ್ನು ತಿರಿಗಿ ತೆಕ್ಕೊಂಬುವ ಹಾಗೆ ಅವನಿಗೆ ಕಟ್ಟಳೆ ಮಾಡಿದರು. ಹೆನ್ರಿ ಎಂಬವನು ಅತಿ ಗರ್ವದಿಂದ ಈ ಕಟ್ಟಳೆಯನ್ನು ಉಪೇಕ್ಷಿಸಿ, ಇಂಗ್ಲಾಂಡ್ ದೇಶದಲ್ಲಿರುವ ತಿರು ಸಭೆಗೆ ತಂನಂನೇ ಶ್ರೇಷ್ಠನಾಗಿ ನೇಮಿಸಿ ಕೊಂಡದ್ದಲ್ಲದೆ, ತನ್ನ ಪ್ರಜೆಗಳೊಳಗೆ ಯಾರಾದರೂ ಸರಿ ಪಾಪುಸ್ವಾಮಿಯವರ ಅಧಿಕಾರವಂನು ಅಂಗೀಕರಿಸದ ಹಾಗೆ ಹುಕುಂ ಹುಯಿಸಿದನು. ರೋಚೆಸ್ತೆರ್ (Rochester) ಎಂಬ ಪಟ್ಣದ ಮೇತ್ರಾಣಿಯವರಾದ ಫಿಷೆರ್ (Fisher) ಎಂಬವರೂ, ರಾಜ ಮಂತ್ರಿಯಾದ ಥೋಮಸ್ ಮೋರ್ (Thomas More) ಎಂಬವರೂ, ಇಂಥ ಕಟ್ಟಳೆಗೆ ಸಂಮತಿಸದ ಕಾರಣ, ರಾಯನು ಅವರಂನು ಹತ ಮಾಡಿಸಿದನು. ಇದಲ್ಲದೆ ಈ ಕಾರಣದಿಂದಲೇ ಕಥೂರ್ಸಿಯನ್ (Carthusian) ಸನ್ಯಾಸಿಗಳ ಮೂರು ಮಂದಿ ಶ್ರೇಷ್ಠರಂನೂ ಫ್ರಾಂಸಿಸ್ಕನ್ (Franciscan) ಸನ್ಯಾಸಿಗಳಾದ ಅಂಥೋನಿ ಬ್ರೊರ್ಬೀ (Anthony Brorbey), ಥೋಮಸ್ ಬೆಲ್ಬಿಯಂ (Thomas Belchiam), ಜೋನ್ ಫೋರೆಸ್ತ್ (John Forest), ಎಂಬವರಂನೂ, ಲಿಯೊನರ್ಡ್ ಗ್ರೇ (Leonard Grey), ನಿಕೋಲಾಸ್ ಕರೀ (Nicholas Carey) ಎಂಬ ದೊರೆಗಳಂನೂ, ಇಂನೂ ಅನೇಕ ಕಥೋಲಿಕ್ ಜನರನ್ನೂ ಕೊಂಧಾಕಿಸಿದನು. ತರುವಾಯ ರಾಯನು ಸನ್ಯಾಸಿ ಮಠಗಳ ಲೂಟಿ ಮಾಡ ಯೋಚಿಸಿದನು. ೧೫೩೬ ನೇ ವರುಷದಲ್ಲಿ ೩೭೬ ಸನ್ಯಾಸಿ ಮಠಗಳಂನು ನಿರ್ಮೂಲ ಮಾಡಿದ್ದಲ್ಲದೆ, ಅವರ ಆಸ್ತಿ ಪಾಸ್ತಿಗಳನ್ನು ತನಗಾಗಿ ಸ್ವೀಕರಿಸಿದನು. ಆ ಒಡವೆಗಳ ಒಟ್ಟು ೧೫, ೩೪, ೨೪೨ ರೂಪಾಯಿಗಳಾಗಿತ್ತು. ೧೫೪೦ ನೇ ವರುಷದಲ್ಲಿ ತಿರಿಗಿ ಬೇರೆ ಸನ್ಯಾಸಿ ಮಠಗಳಂನು ಕೊಳ್ಳೆ ಮಾಡುವ ಹಾಗೂ ಅಭ್ಯಂತರ ಮಾಡುವವರಿಗೆ

(*a*) Vid. Bossuet, Variat. l. 7. n. 51 et seq. — Lingard, t. 6. p. 191 et seq. — Cobbett, Chauncey, Pole, Strype, etc.

ಮರಣಾಜ್ಞೆಯನ್ನು ನಿರ್ಣಯಿಸುವ ಹಾಗೂ ಕ್ರೊಮ್ವೆಲ್ (Cromwell) ಎಂಬವನನ್ನು ಕಳುಹಿಸಿಬಿಟ್ಟನು. ಆ ಸಮಯದಲ್ಲಿ ಗ್ಲಸ್ತೋನ್ಬರಿ (Glastonbury) ಮಠದ ಶ್ರೇಷ್ಠರು ಕೊಂಧಾಕಲ್ಪಟ್ಟರು. ಕಾರ್ದಿನಲ್ (Cardinal) ಎಂಬ ಅತಿ ಮೇತ್ರಾಣಿಯವರಾದ ಪೋಲ್ (Pole) ಎಂಬವರು ರಾಯನ ವ್ಯಭಿಚಾರವನ್ನು ಆಕ್ಷೇಪಿಸಿದ ನಿಮಿತ್ತ, ಕೊರ್ರಿ ಎಂಬವನು ಇವರ ತಾಯಿಯನ್ನೂ ಇವರ ನೆಂಟರೊಳಗೆ ಮೂವರನ್ನೂ ಹಿಡಿದು ಮರಣಕ್ಕೆ ನಿರ್ಣಯಿಸಿದನು. ಜೀವಿತವನ್ನು ಬಾಧಿಸುವದು ಆ ದುಷ್ಟ ರಾಯನಿಗೆ ಸಾಲದೆ, ಸತ್ತವರಿಗೆ ಸಹಾ ಅಪಮಾನವನ್ನು ಮಾಡ ಯೋಚಿಸಿದನು. ಕಂತೆರ್ಬರಿ (Canterbury) ಪಟ್ಣದಲ್ಲಿದ್ದ ಅರ್ಜ್ಯ. ಥೋಮಸೆಂಬವರ ಮಾಡವನ್ನೂ ದೇವಸ್ಥಾನದಲ್ಲಿದ್ದ ಅಮೂಲ್ಯವಾದ ಬಂಡಾರಗಳನ್ನೂ ಲೂಟಿ ಮಾಡಿದ್ದಲ್ಲದೆ, ಆ ಅರ್ಜ್ಯ ಶಿಷ್ಟವರ ಉಳ್ವಡಿಗಳನ್ನು ದಹಿಸಿ, ಧೂಳಿಗೆ ಚೆಲ್ಲಿಬಿಡುವಹಾಗೆ ಕಟ್ಟಳೆ ಮಾಡಿದನು. ೫೬ನೇ ಪ್ರಾಯದವನಾಗಿದ್ದಾಗ, ತನ್ನ ಭೋಜನ ಪ್ರಿಯಕ್ಕೂ ಕಾಮಾತುರಕ್ಕೂ ತಕ್ಕ ಮರಣವನ್ನು ಹೊಂದಿದನು. ಅವನು ಬಹಳ ಬೊಜ್ಜಿಗನಾಗಿದ್ದ ಕಾರಣ, ಮೈಯ್ಯಿ ಕದಲಿಸಲಾರದೆ ಇದ್ದನು. ತನ್ನ ರಾಜ್ಯಭಾರದ ಕಾಲದಲ್ಲಿ ಕಾರ್ದಿನಲೆಂಬ ಇಬ್ಬರು ಶ್ರೇಷ್ಠ ಮೇತ್ರಾಣಿಯವರನ್ನೂ, ಮೂವರು ಅತಿ ಮೇತ್ರಾಣಿಯವರನ್ನೂ, ೧೮ ಮಂದಿ ಮೇತ್ರಾಣಿಯವರನ್ನೂ, ೧,೧೪೪ ಮಂದಿ ಗುರುಗಳನ್ನೂ, ೪೮ ಮಂದಿ ಪ್ರಭುಗಳನ್ನೂ, ಇನ್ನು ಲೆಖ್ಖವಿಲ್ಲದ ಬೇರೆ ಕಥೋಲಿಕ್ ಜನರನ್ನೂ ಹತ ಮಾಡಿಸಿದನು (*a*). ತನ್ನ ಹೆಂಡತಿಯರೊಳಗೆ ಇಬ್ಬರನ್ನು ಪರಿತ್ಯಜಿಸಿ ಬಿಟ್ಟನು; ಮತ್ತಿಬ್ಬರಿಗೆ ತಲೆ ಹೊಯ್ಯ ಕಟ್ಟಳೆ ಇಟ್ಟನು.

---

## ಎಲಿಸಬೆಥ್. (ELIZABETH)

೧೫೫೩ ನೇ ವರುಷದಲ್ಲಿ ೬ನೇ ಎಡ್ವಾರ್ದನ ಸಹೋದರಿಯಾದ ಮೇರಿ (Mary) ಎಂಬವಳು ಇವನಿಗೆ ಬದಲಾಗಿ ರಾಜ್ಯಭಾರ ಮಾಡಿ, ಸತ್ಯವೇದವನ್ನು ಇಂಗ್ಲಾಂಡ್ ದೇಶದಲ್ಲಿ ತಿರಿಗಿ ಸ್ಥಾಪಿಸಿದಳು. ಆದರೆ ಈಕೆಯು ತೀರಿಹೋದ ಬಳಿಕ, ಈಕೆಯ ತಂಗಿಯಾದ ಎಲಿಸಬೆಥ್ (Elisabeth) ಎಂಬವಳು ಅಧಿಕಾರವನ್ನು ಹೊಂದಿ, ಪ್ರೊತೆಸ್ತಾಂತ್ ಮಾರ್ಗಕ್ಕೆ ಜನರನ್ನು ಕಡ್ಡಾಯದಿಂದ ತಿರಿಗಿ ಸೇರಿಸಿದಳು. ಅವಳು ಬಹು ಕಪಟವೂ ಗುಪ್ತವೂ ಆದ

(*a*) Vid. Recev. lib. XLI, p. 476. — Bernard, Catholic. veng. 1842. p. 41 et suiv.

ಗುಣವುಳ್ಳವಳಾಗಿ, ತಂನ ಸಹೋದರನಾದ ಎಡ್ವಾರ್ಡ್ ಎಂಬವನ ಕಾಲದಲ್ಲಿ ಪ್ರೋತೆಸ್ತಾಂತ್ ವೇದಸ್ಥಳಾಗಿಯೂ, ಮೇರಿಯೆಂಬ ತನ್ನ ಅಕ್ಕನ ಕಾಲದಲ್ಲಿ ಕಥೋಲಿಕ್ ವೇದಸ್ಥಳಾಗಿಯೂ, ತಂನನ್ನು ತೋರಿಸಿಕೊಂಡಳು. ಆದರೆ ರಾಜಾಭಿಷೇಕವಂನು ಹೊಂದಿದಾಕ್ಷಣವೇ, ತನ್ನ ನಿಜವಾದ ಅಭಿಪ್ರಾಯವಂನು ಬೈಲು ಮಾಡಿ, ಇಂಗ್ಲಾಂಡ್ ಸೀಮೆಯಲ್ಲಿ ಪ್ರೋತೆಸ್ತಾಂತ್ ವೇದವಂನು ತಿರಿಗಿ ಏರ್ಪಡಿಸಿ, ತಂನ ಕಥೋಲಿಕ್ ಪ್ರಜೆಗಳಂನು ಹಿಂಸೆ ಪಡಿಸಲಾರಂಭಿಸಿದಳು. ತಂಮ ವೇದವಂನು ಬೊಂಕಲೊಲ್ಲದೆ ಇದ್ದಂಥ ಕಥೋಲಿಕ್ ಮೇತ್ರಾಣಿಯವರು ಗಡಿ ದಾಟಿಸಲೂ ಮರಣದ ಪರಿಯಂತರಕ್ಕೂ ಕಠಿಮನೆಯಲ್ಲಿ ಹಾಕಲೂ ಪಟ್ಟರು. ನಿಕೊಲಾಸ್ ಹೀಥ್ (Nicholas Heath), ಎಡ್ಮೊಂಡ್ ಬೊನೆರ್ (Edmond Bonner), ತೊನ್ಸ್ತಲ್ (Tunstal), ವೈತ್ (White), ವಾತೊರ್ನ್ (Warton), ಬೇನ್ (Bayne), ಎಂಬವರೂ, ಇಂನು ಬೇರೆ ಅನೇಕರೂ, ಈ ಪ್ರಕಾರವಾಗಿ ತೀರಿಕೊಂಡರು. ಸಮಸ್ತ ಕಥೋಲಿಕ್ ಜನರು ಪ್ರೋತೆಸ್ತಾಂತ್ ಗುಡಿಗಳಿಗೆ ಬಂದು ಬೋಧಕರ ಪ್ರಸಂಗಗಳಂನು ಕೇಳುವ ಹಾಗೆ ವಿಧಿಸಿ, ಒಲ್ಲದವರಿಗೆ ಭಾರಿ ಜುಲ್ಮಾನ ನೇಮಿಸ ಕಟ್ಟಳೆ ಮಾಡಿದಳು. ಪೂಜೆ ನೋಡುವಂಥವರಿಗೂ, ಪಾಪ ಸಂಕೀರ್ತನ ಮಾಡುವಂಥವರಿಗೂ, ಪಾಪುಸ್ವಾಮಿಯವರ ಜ್ಞಾನಾಧಿಕಾರಕ್ಕೆ ಒಳಗಾಗುವವರಿಗೂ, ತಂಮ ತಿರು ಕೈಂಕರ್ಯವಂನು ನೆರವೇರಿಸುವಂಥಾ ಗುರುಗಳಿಗೂ, ಇಂಗ್ಲಾಂಡ್ ಸೀಮೆಗೆ ಬರುವಂಥಾ ಅನ್ಯದೇಶಸ್ಥರಾದ ಗುರುಗಳಿಗೂ, ಇಂಥವರಿಗೆ ಆಶ್ರಯವಂನು ಕೊಡುವಂಥ ಮಂದಿಗಳಿಗೂ, ಮರಣಾಜ್ಞೆಯಂನು ನೇಮಿಸಿದಳು. ಜೋನ್ ಸ್ತೋರಿ (John Storie), ಕಥ್ಬೆರ್ತ್ ಮಾಜ್ಞ್ (Cuthbert Magne), ಎಡ್ಮೊಂಡ್ ಕಂಪಿಯನ್ (Edmond Campian) ಎಂಬವರೂ, ಇಂನು ಅನೇಕ ಗುರುಗಳೂ ಸಂಸಾರಿಗಳೂ ಹೆಂಙುಗಳೂ, ಈ ಪ್ರಕಾರವಾಗಿ ಬಹು ನಿಷ್ಠೂರವಾದ ಮರಣವಂನು ಹೊಂದಿದರು. ಇದಲ್ಲದೆ, ತಂನ ನೆಂಟಳಾಗಿಯೂ ಸ್ಕೊತ್ಲಾಂಡ್ ದೇಶದ ರಾಣಿಯಾಗಿಯೂ ಕಥೋಲಿಕ್ ವೇದಸ್ಥಳಾಗಿಯೂ ಇದ್ದಂಥ ಮೇರಿ ಸ್ತ್ಯುವರ್ತ್ (Mary Stuart) ಎಂಬವಳ ಮೇಲೆ ಇಲ್ಲದ ತಪ್ಪು ಹೊರಿಸಿ, ಈಕೆಯು ಇಂಗ್ಲಾಂಡ್ ಸೀಮೆಗೆ ದ್ರೋಹವಾಗಿ ಸಂಚು ಮಾಡಿದ್ದಾಳೆಂತ ಧೊರೆಗಳಿಂದ ತೀರ್ಪು ಮಾಡಿಸಿ, ಅವಳಂನು ಅನ್ಯಾಯವಾಗಿ ಕೊಂದ್ಹಾಕಿಸಿದಳು. ಎಲಿಸಬೆಥೆಂಬವಳು ಮದಿವೆ ಮಾಡಿಕೊಳ್ಳಲಿಲ್ಲಾ; ಆದರೆ ತಂನ ಮಾನಕ್ಕೆ ಭಂಗವಾಗಿ ಏಳು ಮಂದಿ ಮಿಂಡಗಾರರಂನು ಇರಿಸಿ

ಕೊಂಡದ್ದಲ್ಲದೆ (*a*), ಇಬ್ಬಂದಿಯಾದ ಮಕ್ಕಳು ರಾಜ್ಯಭಾರಕ್ಕೆ ಬಾಧ್ಯಸ್ತರಾಗುವಹಾಗೆ ಧೊರೆಗಳಿಂದ ಒಂದು ನಿಬಂಧನೆಯನ್ನು ಮಾಡಿಸಿದಳು (*b*). ಇಷ್ಟು ಅವಲಕ್ಷಣವಾದ ದುರ್ನಡತೆಯುಳ್ಳ ಹೆಂಗಸನ್ನು ಕನ್ಯಾಸ್ತ್ರೀಯಾದ ರಾಣಿ ಎಂದು ಕರೆಯುವದಕ್ಕೆ ಪ್ರೊತೆಸ್ತಾಂತರಾದ ಇಂಗ್ಲಿಷ್ ಜನರು ನಾಚಿಕೆ ಪಡದೆ ಇರುವದೇನು (*c*)?

---

## ನೊಕ್ಸ್. (KNOX.)

೧೫೦೫ ನೇ ವರುಷದಲ್ಲಿ ಜಿಫ್ಫೊರ್ಡ್ ಎಂಬ ಪುರದಲ್ಲಿ ಹುಟ್ಟಿದ ನೊಕ್ಸ್ (Knox) ಎಂಬವನು ಅವಲಕ್ಷಣವಾದ ಮೋಹದಿಂದಲೂ ಪಂಪು ಶೂನ್ಯದಿಂದಲೂ ಪ್ರಖ್ಯಾತಿಯಾಗಿಯೂ ಮಠ ಭ್ರಷ್ಟನಾದ ಸನ್ಯಾಸಿಯಾಗಿಯೂ ಇದ್ದದೇ ಹೊರತು ಇತರವಲ್ಲಾ. ಮರ್ರೇ (Murray) ಎಂಬ ಧೊರೆಯು ನಡಿಸಿದಂಥ ಸಕಲವಾದ ಅನ್ಯಾಯದ ದುಷ್ಕ್ರಿಯೆಗಳಿಗೆ ಅವನು ಸಹಾಯ ಮಾಡಿದನು. ದೇವಸ್ಥಾನಗಳನ್ನೂ ಸನ್ಯಾಸಿ ಮಠಗಳನ್ನೂ ಕೊಳ್ಳೆ ಮಾಡಿ ಕೆಡವಿಬಿಟ್ಟು ಸುಟ್ಟದ್ದಲ್ಲದೆ, ಕಥೋಲಿಕೆಂಬ ಮತಸ್ತರನ್ನು ಹೇಳ ಕೂಡದ ಕ್ರೂರತ್ವದೊಂದಿಗೆ ಹಿಂಸೆ ಪಡಿಸಿದನು. ಬೆತೊನ್ (Beton) ಎಂಬ ಕಾರ್ದಿನಲ್ ಅತಿ ಮೇತ್ರಾಣಿಯವರು ಅನ್ಯಾಯವಾಗಿ ಸಂಹರಿಸಲ್ಪಡುವಾಗ, ಅದನ್ನು ಕುರಿತು ಬಹು ಸಂತೋಷ ಪಟ್ಟು ಇದರ ವಿವರವನ್ನು ಬರೆದಿರಿಸಿದನು. ಪ್ರೆಸ್ಬಿತೆರಿಯನ್ (Presbyterian) ಇಲ್ಲವೆ ಪ್ಯುರಿತನ್ (Puritan) ಎಂದು ಕರೆಯಲ್ಪಟ್ಟ ಪ್ರೊತೆಸ್ತಾಂತರ ಮಾರ್ಗಕ್ಕೆ ಮೂಲಕರ್ತನಾದವನು ಇವನೇ. ೧೫೭೨ ನೇ ವರುಷದಲ್ಲಿ ಸತ್ತನು.

---

## ಕ್ರಾನ್ಮೆರ್. (CRANMER.)

ಪ್ರೊತೆಸ್ತಾಂತ್ ಚರಿತ್ರೆಗಾರರು ಕ್ರಾನ್ಮೆರೆಂಬವನನ್ನು ಬಹುಶಾಸ್ತುತಿಸಿ, ಅವನು ಇಂಗ್ಲಾಂಡ್ ಸೀಮೆಗೆ ಪ್ರಧಾನವಾದ ಕೀರ್ತಿಯೆಂದು

---

(*a*) Vid. Lingard. t. 8. ch. VII. p. 407. London, 1838. viz. Dudley, Hatton, Raleigh, Oxford, Blount, Simier and Anjou. (*b*) Vid. Statute Book, 13, ch. 1. p. 2. (*c*) Consult Lingard t. 8. — Rorhbacher, t. XXIII and XXIV. — Recev. t. 7 and 8. — Bernard, Catholicisme vengé.

ಭೂಷಿಸಿದ್ದರಿಂದ, ಅಂಥ ಸ್ತುತಿ ಭೂಷಣೆಗಳೆಲ್ಲಾ ನ್ಯಾಯವಾಗಿ ಇರುತ್ತವೋ, ಇಲ್ಲವೋ, ಎಂದು ನೋಡ ತಕ್ಕದ್ದಾಗಿದೆ.

ಥೋಮಸ್ ಕ್ರನ್ಮೆರ್ (Thomas Cranmer) ಎಂಬವನು ೧೪೮೯ ವರ್ಷ ಹುಟ್ಟಿ, ಕಾಂಬ್ರಿಡ್ಜ್ (Cambridge) ಎಂಬ ವಿದ್ಯಾಶಾಲೆಯಲ್ಲಿ ಕಲಿಸಲ್ಪಟ್ಟು, ತರುವಾಯ ಅದರಲ್ಲಿಯೇ ವೇದಾಂತ ಪಾಠಕನಾಗಿದ್ದನು. ೮ನೇ ಹೆನ್ರಿ ತಂನ ಸತಿಯಾದ ಕಥರಿನ್ (Catherine of Arragon) ಬಿಟ್ಟು, ಅನ್ನಾ ಬೊಲೇನ್ (Anna Boleyn) ಎಂಬ ತಂನ ಸೂಳೆಯಂನು ಮಡಗುವದಕ್ಕೆ ಆಲೋಚನೆ ಮಾಡುವ ವೇಳೆಯಲ್ಲಿ, ಇಂಥಾ ಪರಿತ್ಯಾಗ ಮೆಪ್ಪಿಸುವದಕ್ಕೂ ರಾಯನಿಗೆ ಧೈರ್ಯ ಹೇಳುವದಕ್ಕೂ ಅವನು ನಾಚಲಿಲ್ಲಾ. ಆದ್ದರಿಂದ, ಜೆರ್ಮನಿ (Germany) ದೇಶದ ಶಾಸ್ತ್ರಿಗಳ ಸಂಮತಿಯಂನು ಕೇಳುವ ಬಗ್ಯೆ, ೮ನೇ ಹೆನ್ರಿ ಆ ಸೀಮೆಗೆ ಅವಂನ ಕಳುಹಿಸಿದನು. ಆದರೆ, ಕ್ರನ್ಮೆರನು ಅಲ್ಲಿ ಎಷ್ಟು ಮಾತು, ಎಷ್ಟು ಹಣ ಖರ್ಚು ಮಾಡಿದ್ದಾಗ್ಯೂ, ಬಹು ಸ್ವಲ್ಪ ಮಂದಿಗಳ ಅನುಮತಿಯಂನು ಆ ಅವಲಕ್ಷಣವಾದ ಪರಿತ್ಯಾಗಕ್ಕಾಗಿ ನುಡಿಸಿದನು. ಜೆರ್ಮನಿ ಸೀಮೆಯಲ್ಲಿದ್ದಾಗ, ಲೂಥೆರೆಂಬವನ (Luther) ದುರ್ಬೋಧೆಯಂನು ಕೈಗೊಂಡು, ಒಸಿಯಂಡೆರ್ (Osiander) ಎಂಬವನ ಪ್ರಿಯ ಸ್ನೇಹಿತನಾದನು. (ಆ ಒಸಿಯಂದೆರನು ನಾಸ್ತಿಕನೆಂದೂ ಪತಿಂಗನೆಂದೂ ಕಲ್ವಿನ್ (Calvin) ಮೆಲಂಕ್ಥೋನ್ (Melancthon) ಎಂಬ ಪತಿತರು ಹೇಳಿದ್ದಾರೆ.) ಕ್ರನ್ಮೆರನು ಆಗ ಕಥೋಲಿಕ್ ಗುರುವಾಗಿದ್ದಾಗ್ಯೂ, ತಂನ ವ್ರತ ಭಂಜಿಸಿ, ಒಸಿಯಂದೆರನ ಸಹೋದರಿಯಂನು ಲಗ್ನ ಮಾಡಿಕೊಂಡು, ಅವಳಂನು ಇಂಗ್ಲಾಂಡ್ ದೇಶಕ್ಕೆ ಕರೆತಂದನು. ಅವನು ಪತಿತನಾಗಿದ್ದದ್ದೂ ಲಗ್ನ ಮಾಡಿದ್ದೂ ಈ ಎರಡು ಸಂಗತಿ ತಿಳಿಯದವನಾದ ಹೆನ್ರಿ ರಾಯನು ಅವನಿಗೆ ಕಾಂತೆರ್ಬರಿ ಮೇತ್ರಾಣೀ ಸ್ಥಾನವಂನು ಒಪ್ಪಿಸಿದನು; ಮತ್ತು ಪಾಪುಸ್ವಾಮಿಯವರು ಸಹಾ ಆ ಕಪಟಸ್ಥನ ದುರ್ನಡತೆಯಂನು ಅರಿಯದೆ ಇದ್ದಕಾರಣ, ಅವನಂನು ಮೊಕರೂರ್ ಮಾಡಿದರು. ೧೫೩೩ ನೇ ಇಸವಿ ಮಾರ್ಚ್ ತಿಂಗಳ ೧೩ ನೇ ತಾರೀಖು ಅವನಿಗೆ ಅಭಿಷೇಕವಾಯಿತು. ಕಥೋಲಿಕ್ ಮತದ ಆಚಾರಗಳಿಗೆ ಅನುಸಾರವಾಗಿ, ಬಿಷೊಪ್ (Bishop) ಎಂಬ ಮೇತ್ರಾಣಿಯವರು (ತತಿಂಮ ಗುರುಗಳ ಹಾಗೆ) ವಿರಕ್ತರಾಗಿರಲೂ ಪಾಪುಸ್ವಾಮಿಯವರಿಗೆ ಜ್ಞಾನ ವಿಷಯಗಳಲ್ಲಿ ವಿಧೇಯಸ್ಥರಾಗಿರಲೂ ಬೇಕಾದ್ದರಿಂದ, ಅಭಿಷೇಕದ ವೇಳೆಯಲ್ಲಿ ಇಂಥಾ

ಕಟ್ಟಳೆಗಳ ಅನುಸರಿಸುತ್ತೇನೆಂಬ ವಾಗ್ದತ್ತವಂನೂ ಆಣೆಯಂನೂ ಸರು ದೇವರ ಸಮುಖದಲ್ಲಿಯೂ ಮನುಷ್ಯರ ಮುಂದೆಯೂ ಮಾಡ ಪದ್ಧತಿಯಾಗಿದೆ. ಕ್ರನ್ಮೆರನು ಇದೆಲ್ಲಾ ಅರಿತಿದ್ದಾಗ್ಯೂ, ಮತ್ತು ಆ ಕಾಲದಲ್ಲಿ ಒಬ್ಬ ಹೆಂಗಸು ಇಟ್ಟುಕೊಂಡಿದ್ದಾಗ್ಯೂ, ಪಾಪುಸ್ವಾಮಿಯವರ ಜ್ಞಾನಾಧಿಕಾರವ ತಳ್ಳಿ ತೀರ್ಮಾನಿಸಿದ್ದಾಗ್ಯೂ, ಹೇಳಬಾರದ ಕಪಟವ ಸಾಧಿಸಿ, ವಿರಕ್ತ್ವವೆಂಬ ವಾಗ್ದತ್ತವಂನೂ ಪಾಪುಸ್ವಾಮಿಯವರಿಗೆ ವಿಧೇಯತ್ವದ ವ್ರತವಂನೂ ಮೊದಲಾಗಿ ಮಾಡಿದನು.

ಆದರೆ, ಅವನು ತಂನ ಹೆಚ್ಚಾದ ವಂಚನೆಯಂನು ಇಂನು ಬೇರೆ ಅನೇಕ ಕಾರ್ಯಗಳಲ್ಲಿ ತೋರಿಸಿದನು. ೮ನೇ ಹೆನ್ರಿ ಪಾಪುಸ್ವಾಮಿಯವರ ಜ್ಞಾನಾಧಿಕಾರವಂನು ದುಡುಕುತನವಾಗಿ ಸ್ವೀಕರಿಸಿದ್ದಾಗ್ಯೂ, ಕಥೋಲಿಕ್ ಮತದ ವಿಶ್ವಾಸದ ಸತ್ಯಗಳಂನೂ ಪ್ರಧಾನ ನೇಮಕಗಳಂನೂ ತೆಗದು ಹಾಕದೆ, ಇವುಗಳಂನು ಖಂಡಿತವಾಗಿ ನಡಿಸುತ್ತಿದ್ದನು. ಹೀಗಿದ್ದು, ಕ್ರನ್ಮೆರನು ಅಂತರಂಗದಲ್ಲಿ ಲೂಥೆರನ್ ಮತಸ್ಥನಾಗಿದ್ದರೂ, ರಾಯನಿಗೆ ಪ್ರೀತಿ ಪಡುವಂತೆ, ೧೩ ವರ್ಷದ ತನಕ ತಂನಂನು ಕಥೋಲಿಕನಾಗಿ ತೋರಿಸಿಕೊಳ್ಳಲೂ, ಪೂಜೆ ಮಾಡಲೂ, ಗುರುಪಟ್ಟವ ಕೊಡಲೂ, ಅರ್ಚ್ಯ ಶಿಷ್ಟರಂನು ವಂದಿಸಲೂ, ಸತ್ತವರಿಗಾಗಿ ಬೇಡಿಕೊಳ್ಳಲೂ, ಕಥೋಲಿಕ್ ಮತಕ್ಕೆ ಸಂಬಂಧ ಜ್ಞಾನ ಕಾರ್ಯಗಳೆಲ್ಲಾ ನೆರವೇರಿಸಲೂ ಬಿಡಲಿಲ್ಲಾ. ಅದೆಲ್ಲಾ ಸುಳ್ಳು ಎಂತ ಅವನು ನೆನಸಿ ಇದ್ದರೆ, ಯಾತಕ್ಕೆ ಅವನು ರಾಯನ ಬಳಿಗೆ ಹೋಗಿ, ಅದೆಲ್ಲಾ ಸುಳ್ಳು ಎಂತ ಹೇಳಲಿಲ್ಲಾ? ಮನಸ್ಸಿನಲ್ಲಿ ಒಂದು ವಿಶ್ವಾಸಿಸಲೂ, ಬಾಯಿಯಲ್ಲಿ ಇಂನೊಂದು ಹೇಳಲೂ ಯೋಗ್ಯವೋ?

ಆದರೆ ಕ್ರನ್ಮೆರನ ಕಪಟದ ಕೆಲಸಗಳು ಇಂನು ಬಹಳ ಅವೆ. ೮ನೇ ಹೆನ್ರಿ ಪರಿತ್ಯಾಗದ ಅಪ್ಪಣೆಯಂನು ೭ನೇ ಕ್ಲೆಮೆಂಟ್ (Clement VII) ಎಂಬ ಪಾಪುಸ್ವಾಮಿಯವರ ಬಳಿಗೆ ವಿಜ್ಞಾಪಿಸುವ ವೇಳೆಯಲ್ಲಿ, ಯಾವದೊಂದು ತೀರ್ಪು ಇಂನು ಆಗದೆ ಇರಲಾಗಿ, ಪೋಕರಿಯಾದ ಆ ರಾಯನು, ಕ್ರನ್ಮೆರನ ಮುಂದೆ, ಲೀ (Dr. Lee) ಎಂಬ ಗುರುವಿನಿಂದ ತನಗೂ ಅಂನಾ ಬೊಲೇನಳಿಗೂ ವಿವಾಹದ ಸಾಂಗ್ಯಗಳಂನು ನೆರವೇರಿಸ ಮಾಡಿದನು. ಇಷ್ಟು ತೀವರ ಮಾಡಿದ್ದಕ್ಕೆ ನಿಮಿತ್ತವೇನೆಂದರೆ, ಅನ್ನಾ ಬೊಲೇನ್ ಬಹು ತಿಂಗಳ ಬಸುರಿಯಾಗಿದ್ದಳು; ಮದಿವೆಗೆ ಮುಂಚೆ ಅವಳು ಹೆತ್ತರೆ, ಅವಳಿಗೂ ರಾಯನಿಗೂ ಅಪಕೀರ್ತಿ ಆದಾತು ಎಂಬ ಭಯ

ವೇ. ಹೀಗಿರಲಾಗಿ, ಹೆನ್ರಿ ಕೋರಿದ ಮೇರೆಗೆ, ಕ್ರಾನ್ಮೆರ್ ಎಂಬ ಅತಿಮೇತ್ರಾಣಿಯು ಪ್ರಸಿದ್ಧಿಯಾಗಿ ಅರುಹಿಸಿದ್ದೇನೆಂದರೆ: ರಾಯನಿಗೂ ಕಥರಿನಳಿಗೂ ಆದ ವಿವಾಹ ರದ್ದಾಗಿತ್ತೆಂದೂ, ಅವನಿಗೂ ಅನ್ನಾಬೊಲೇನಳಿಗೂ ಆದ ೨ನೇ ವಿವಾಹವು ಮಂಜೂರೆಂದೂ ಅರುಹಿಸಿದನು. (೨೩ ಮೇ ೧೫೩೩)— ಒಳ್ಳೇದು; ಆದರೆ ರಾಯನ ಮೋಹ ತಂಣಗಾಗಿ ಅನ್ನಳ ಮೇಲೆ ಅರೋಚಿಕೆ ಪಟ್ಟು, ಅವಳಿಗೆ ತಲೆ ಕಡಿಸಿ, ಜೇನ್ ಸೀಮೋರ್ (Jane Seymour) ಎಂಬವಳ ಮೇಲೆ ಆಶೆ ಪಡುತ್ತಾನೆ. ಹೀನ ಗುಲಾಮನಾದ ಕ್ರಾನ್ಮೆರನು ತಿರಿಗಿ ಪ್ರಸಿದ್ಧಿ ಮಾಡುವದೇನೆಂದರೆ : ರಾಯನಿಗೂ ಅನ್ನಳಿಗೂ ಆದ ವಿವಾಹ ರದ್ದು ಎಂತಲೂ, ಇವಳಿಗೆ ಹುಟ್ಟಿದ ಎಲಿಸಬೆಥ್ (Elizabeth) ಇಬ್ಬಂದಿ ಮಗಳೆಂತಲೂ, ಪ್ರಸಿದ್ಧಿ ಮಾಡುತ್ತಾನೆ. ಜೇನ್ ಸೀಮೋರ್ ಎಂಬವಳು ಪ್ರಸೂತಿಯಾಗಿ ಸತ್ತಳು. ಆಗ ರಾಯನು ಅನ್ನ್ ಡಿ ಕ್ಲೇವ್ (Anne de Clèves) ಎಂಬವಳಂನು ಲಗ್ನ ಮಾಡಿಕೊಂಡನು. (೬ ಜನುವರಿ ೧೫೪೦). ಆದರೆ ೬ ತಿಂಗಳೊಳಗೆ ಅವಳಂನು ಅಸಂಹಿಸಿ, ಪರಿತ್ಯಾಗ ಮಾಡ ಯೋಚಿಸುತ್ತಾನೆ. (ಜೂಲಾಯಿ ೧೫೪೦.) ಆಕ್ಷಣವೇ ಕ್ರಾನ್ಮೆರನು ಹಾಜರಾಗಿನಿಂತು ಪ್ರಸಿದ್ಧಿ ಮಾಡುವದೇನೆಂದರೆ: ರಾಯನಿಗೂ ಅನ್ನ ಡಿ ಕ್ಲೇವೆಂಬವಳಿಗೂ ಆದ ಮದುವೆ ರದ್ದು ಎಂತ ಅರುಹಿಸುತ್ತಾನೆ. ದೇವರಿಗೂ ಮನುಷ್ಯರಿಗೂ ಪರಿಹಾಸ್ಯಮಾಡಿದಹಾಗೆ ಆಯಿತಲ್ಲವೋ ?

ಅಷ್ಟರೊಳಗೆ ಕ್ರಾನ್ಮೆರನು ತಂನ ಜೆರ್ಮನಿ ಜಾತಿಯವಳಾದ ಹೆಂಡತಿಯಂನು ಬಲಬೋಬಸ್ತಾಗಿ ಬಚ್ಚಿಟ್ಟುಕೊಂಡಿದ್ದನು. ಆದರೆ, ೧೫೩೦ನೇ ವರ್ಷ, ಮದಿವೆ ಮಾಡುವಂಥಾ ಗುರುಗಳಿಗೆ ಹೆನ್ರಿ ರಾಯನು ಮರಣಾಜ್ಞೆಯಂನು ನೇಮಿಸಿದ್ದರಿಂದ, ಕ್ರಾನ್ಮೆರನು ಭಯಪಟ್ಟು, ತಂನ ಹೆಂಣ್ಣಂನು ಜೆರ್ಮನಿಗೆ ವಾಪಸು ಕಳುಹಿಸಿದನು. ಹೆನ್ರಿ ರಾಯನು ಸತ್ತ ಬಳಿಕ, ಪ್ರೋತೆಸ್ತರೆಂಬ ಸೋಮೆರ್ಸೆತ್ (Somerset) ಧೊರೆಯು ಪ್ರೋತೆಸ್ತಾಂತರಿಗೆ ಕುಮುಕು ಮಾಡುತ್ತಾನೆಂದು ತಿಳಿದು, ಕ್ರಾನ್ಮೆರನು ತಂನ ಹೆಂಡತಿಯಂನು ತಿರಿಗಿ ಕರೆಸಿದ್ದಲ್ಲದೆ, ತಂನಂನು ಪ್ರೋತೆಸ್ತಾಂತನಾಗಿ ತೋರಿಸಿ ಕೊಂಡು, ಒಂದು ಹೊಸ ಮತವಂನು ಕಾಪಿಸುವದಕ್ಕೆ ಉದ್ಯುಕ್ತನಾದನು.

೬ ನೇ ಎದ್ವಾರ್ಡ್ ಸತ್ತನಂತರ, ಮೇರಿ ಎಂಬವಳು ರಾಜ್ಯಭಾರಕ್ಕೆ ನ್ಯಾಯ ಬಾಧ್ಯಸ್ಥಳಾಗಿದ್ದಳು. ಆದರೆ ಆಕೆಯು ಕಥೋಲಿಕ್ ಮತಸ್ಥಳಾ

ಗಿದ್ದ ನಿಮಿತ್ತ, ಕ್ರಾನ್ಮೇರ್ ಎಂಬವನು ಆಕೆಗೆ ವಿರೋಧವಾಗಿಯೂ ಜೇನ್ ಗ್ರೇ (Jane Grey) ಎಂಬ ಪ್ರೋತೆಸ್ತಾಂತ್ ಧೊರೆಸಾನಿಗೆ ಒತ್ತಾಸೆಯಾಗಿಯೂ ನೊರ್ಥೊಂಬೆರ್ಲಾಂಡ್ (Northumberland) ಎಂಬ ಪಾಳ್ಯಗಾರನ ಸಂಗಡ ಫಿತೂರಿ ಮಾಡಿದನು. ಆ ಪಾತಕದ ನಿಮಿತ್ತವಾಗಿ, ಅವನು ರಾಣಿಯ ಕುಂಜೂರಲ್ಲಿ (Privy Council) ನಿರ್ಣಯ ಪಟ್ಟು, ತಾನು ತಪ್ಪುಗಾರನು ಎಂತ ಒಪ್ಪಿಕೊಂಡು (pleaded guilty), ೧೫೫೩ನೇ ವರ್ಷ ತಾವರ್ (Tower ಎಂಬ ಬುರುಜಿನಲ್ಲಿ ಖೈದಿಯಾದನು. ಆ ಕಾಲದ ಪದ್ಧತಿಗೆ ಅನುಸಾರವಾಗಿ, ಬೆಂಕಿಯಲ್ಲಿ ಸುಡಲ್ಪಟ್ಟು ಸಾಯುವದಕ್ಕೆ ನಿರ್ಣಯಿಸಲ್ಪಟ್ಟನು. ಆಗ ಸಾವಿಗೆ ಭಯಪಟ್ಟು, ಹ್ಯಾಗಾದರೂ ಪ್ರಾಣ ರಕ್ಷಿಸಿಕೊಳ್ಳಬೇಕೆಂದೆಣಿಸಿ, ತಾನು ಮನಃಪೂರ್ವಕವಾಗಿ ಕಥೋಲಿಕ್ ಮತವಂನು ಪುನರು ಕೈಗೊಳ್ಳುತ್ತೇನೆಂತಲೂ, ತಂನಿಂದ ಮೋಸಪಟ್ಟವರೆಲ್ಲರು ತಂನ ಹಾಗೆ ಪ್ರೋತೆಸ್ತಾಂತ್ ದುರ್ಮತವಂನು ವಿಸರ್ಜಿಸಿ ಮನಸ್ತಾಪ ಪಡ ಬೇಕೆಂತಲೂ ಕೇಳಿ, ಇಂಥ ಅರ್ಥಕ್ಕಾಗಿ ಒಂದು ದಸ್ತೈವಜು ಬರೆದು, ಅದಕ್ಕೆ ರುಜು ಹಾಕಿದನು. ಆದರೆ ಅವನು ನೆನಸಿದ ಹಾಗೆ ರಾಣಿಯು ಮಾಫು ಮಾಡಲಿಲ್ಲಾ; ಆಗ ಅವನು ಅತ್ಯಂತ ಕೋಪವ ಗೈದು, ತಾನು ಬರೆದದ್ದಂನು ನಿಷೇಧಿಸಿ, ಪಾಪುಸ್ವಾಮಿಯವರಂನೂ ಕಥೋಲಿಕ್ ಸಭೆಯಂನೂ ದೂಷಿಸಿ, ದುರ್ಬೋಧೆಯಲ್ಲಿ ಮೂರ್ಖನಾಗಿ ಸತ್ತನು. (೧ ಮಾರ್ಚ್ ೯ ೧೫೫೬)

ಮೇಲೆ ಬರೆದದಂನು ನಿಧಾನಿಸಿದರೆ, ವೇದಸಾಕ್ಷಿಯೆಂತಲೂ ಪರಿಶುದ್ಧನೆಂತಲೂ ಪ್ರೋತೆಸ್ತಾಂತರಿಂದ ಸ್ತುತಿಸಲ್ಪಟ್ಟಂಥಾ ಕ್ರಾನ್ಮೇರನು ದೇವ ವಿಶ್ವಾಸವಿಲ್ಲದವನೂ, ರಾಯನ ನೀಚ ಭೂಷಕನೂ, ರಾಜ ದ್ರೋಹಿಯೂ, ದೇವ ದ್ರೋಹಿಯೂ, ಸಟೆ ಆಣೆ ನುಡಿದವನೂ ಆಗಿ ಇದ್ದದೇ ವಿನಾಯಿಸಿ, ಇತರವಲ್ಲವೆಂದು ಕಾಣ ಬರುತ್ತೆ. ಆದದರಿಂದ ಇಂಗ್ಲಾಂಡ್ ರಾಣಿಯಾದ ಮೇರಿ ಎಂಬವಳು ಅವನಂನು ಮರಣಕ್ಕೆ ನಿರ್ಣಯಿಸಿದು ಸರ್ವ ನ್ಯಾಯವೂ ಅವನ ಪಂಚಪಾತಕಗಳಿಗೆ ತಕ್ಕ ಫಲವೂ ಆಗಿತ್ತು.

# ಅಠ್ಠವಣೆ.

